# ನಮ್ಮಲ್ಲಿ

## - ಕನ್ನಡ ಪುಸ್ತಕಗಳು -

ಶಾಂತಿ ಪುರಾಣ . . 3 0 0
ಚಂದ್ರಗುಪ್ತ ಚಕ್ರವರ್ತಿ . 1 0 0
ಸರಸ್ವತೀ . . . 0 8 0
(ಸಾಮಾಜಿಕ ನಾಟಕ)
ಒಂದೇ ತಿಂಗಳಲ್ಲಿ ಇಂಗ್ಲಿಷ್ . 0 8 0
(ಇಂಗ್ಲಿಷ್ ಸ್ವಯಂಬೋಧಿನಿ)
ಸಾಮುದ್ರಿಕ ಶಾಸ್ತ್ರ . . 0 8 0
ಹೊಂದೊವಲ ಹಂಬಲು. . 0 6 0
ವೀರಭೂಮಿ (ಕತೆ) . . 0 1 6
ಗೀತೆಯ ಕೈಗನ್ನಡಿ . . 0 4 0
ಗೀತೆಯ ಮೂಲ . . 0 1 0
(ಈಶಾವಾಸ್ಯೋಪನಿಷತ್ತಿನ ಭಾಷಾಂತರ)
ಸ್ತ್ರೀಪದ್ಯರತ್ನಾಕರ ಭಾಗ I 0 1 0
ಡಿ II 0 1 0
ಡಿ III 0 1 0
ಡಿ IV 0 1 0
ರ ದಾಸರ ಪದ ಭಾಗ I 0
0
0
0
0
0
0
0
0
6
0
6
0

## - ತುಳು ಪುಸ್ತಕಲು -

ಕೃಷ್ಣಸಂಧಾನ (ಪ್ರಸಂಗ) . 0 8 0
(ಕನ್ನಡ ಕೃಷ್ಣಸಂಧಾನವನ್ನೊಳಗೊಂಡಿದೆ.)
ಬಲೀಂದ್ರ (ಕತೆ) . . 0 2 0
(ವಿಮರ್ಶಾತ್ಮಕ ಲೇಖನ)
ಅಳಿಯ ಸಂತಾನ ಕಟ್ಟ್‌ದ ಗುಟ್ಟು 0 4 0
ಕಾನಿಗ್ (ಪದ್ಯ) . . 0 4 0
ತುಳುವ್ಯಾಕರಣ . . 0 8 0
ಜನಮಲ್ F (ನಾಟಕ) . . 0 6 0
ಮದ್‌ಮಾಳತ್ತ್ ಮದ್‌ಮಾಯೆ. 0 2 0
(ಕತೆ)
ಬಂಗಾರ್‌ದಂಗಿದ ಕತೆ . . 0 1 0
ಪದ್ಯಮಾಲಿಕೆ . . 0 1 0
ಸತ್ಯನಾರಾಯಣ ಕತೆ. . 0 8 0
ಸತೀ ಕಮಲೆ (ನಾವೆಲ್) . . 0 6 0
ಕನ್ಯೋಪದೇಶ . . 0 2 0
ಕನ್ನಡಕೊ . .
ವಾಲಿಸುಗ್ರೀವರ ಕಾಳಗ.
ಬೊಬ್ಬರ್ಯ (ಪಾಡ್ದನ) .
ತೊಡಕಿನಾರ್ ,, .
ಮುಂಡತ್ತಾಯ ,, .
ವಿಶ್ವರೂಪ ದರ್ಶನ .
(ಗೀತೆಯ II ನೇ ಅಧ್ಯಾಯದ
ಪದ್ಯಾತ್ಮಕ ಭಾಷಾಂತರ)
ಭಗವದ್ಗೀತೆ

ಾಡ್ ಪ್ರೆಸ್,
ಪಿ, ದ. ಕ.

# ಅಂತರಂಗ

ಸಂಪುಟ ೧.

೨೧ ಅಗೋಸ್ತು '೩೮
ಆದಿತ್ಯವಾರ.

ಸಂಚಿಕೆ ೭.

ಅಂತರಂಗ
ವಿಶೇಷ ತರದ ಕನ್ನಡ ವಾರಪತ್ರಿಕೆ.
**ಮಣಿಪಳ, ಉಡುಪಿ.**

**ಎಸ್. ಯು. ಪಣಿಯಾಡಿ.**
(*Editor-in-chief*)
**ಕೆ. ಹೈದರ್.**
(*Managing Editor*)

●

Associate Ed
ಎಸ್. ಎಸ್.
ಪಿ. ವಿ. ಆ
ಪಿ. ಎಲ್

**ಚಂದಾ ವಿವರ:**

**ವಾರ್ಷಿಕ ಚಂದಾ ಮೂರು ರೂಪಾಯಿ.**

ವಿ. ಪಿ. ಕ್ರಮವಿಲ್ಲ. ಹಣವನ್ನು ಮುಂಗಡವಾಗಿ ಕಳುಹಬೇಕು.

. . . . .

**ಬಿಡಿ ಸಂಚಿಕೆ ಒಂದಾಣೆ.**

ನಿಮ್ಮ ಊರಿನ ಏಜಂಟರಿಂದ ಪಡಕೊಳ್ಳಿರಿ.

. . . . .

**ಜಾಹಿರಾತಿನ ದರ:**

ಪುಟ ರೂಪಾಯಿ ೧೦—೦—೦ ಒಂ

# ಸಪ್ಲೈ ಏಜೆನ್ಸಿ ಲಿಮಿಟೆಡ್ ಉಡುಪಿ.

ಮಾಲಕರು:-

ಮಣಿಪಾಲ ಪವರ್ ಪ್ರೆಸ್, ಶ್ರೀ ಭಾರತವಸ್ತುಮಂದಿರ, ಅಂತರಂಗ,
ತುಳುನಾಡ್ ಸ್ಟೇಶನರಿ ಮಾರ್ಟ್, ತುಳುನಾಡ್ ಪ್ರೆಸ್ ಇತ್ಯಾದಿ.

ಹೆಡ್ ಆಫೀಸು:
ಬೊಬ್ಬರ್ಯ ಜಂಕ್ಷನ್,
ಉಡುಪಿ.

ಅಧಿಕೃತ ಮೂಲಧನ ರೂ. ೧,೦೦,೦೦೦
ಚಂದಾತೆತ್ತ ,, ,, ೩೦,೩೦೦

ಫೈನಾನ್ಸ್ ಡಿಪಾರ್ಟ್‌ಮೆಂಟ್:
ವ್ಯಾಸಭವನಂ,
ಉಡುಪಿ.

ನಿರಖು ಠೇವಣಾತಿಗಳು ಈ ಕೆಳಗಣ ಬಡ್ಡಿಯಲ್ಲಿ ಸ್ವೀಕರಿಸಲ್ಪಡುತ್ತವೆ.

೩ ತಿಂಗಳಿಂದ ೬ ತಿಂಗಳ ವರೆಗೆ ಶೇಕಡ ೪ ಸಲೆಯಲ್ಲಿ
೭ ,, ೧೧ ,, ,, ,, ೫ ,,
೧೨ ,, ೧೮ ,, ,, ,, ೬ ,,

೨ ವರ್ಷ ಯಾ ಅದಕ್ಕಿಂತ ಹೆಚ್ಚಿನ ಸಮಯಕ್ಕಿಡುವ ಬಡ್ಡಿ ದರವನ್ನು ಬರೆದು ತಿಳಕೊಳ್ಳಿರಿ.

ಮೆನೇಜರ್,
**ಫೈನಾನ್ಸ್ ಡಿಪಾರ್ಟ್‌ಮೆಂಟ್,**
ವ್ಯಾಸಭವನಂ, ತೇರಬೀದಿ, ಉಡು



ಪ್ರಭುಪ್ರಜೆಗಳ ಹೋರಾಟ!

...ೀತಿಯನ್ನು
ನ್ನೆಬ್ಬಿಸುವ
...ಗಳ ಸಂಗ್ರಹ
...ಕದಲ್ಲಿ
...ರಾ ಕಡಿಮೆ.
...ಪಿ.
...ಳಲ್ಲಿ

# ಅಂತರಂಗ

## ಅರಸಿ-ಆರಿಸಿದ್ದು

ಮಂದಪಕ್ಷೀಯರು ಕಾಂಗ್ರೆಸಿಗೆ ವಿರುದ್ಧವಾಗಿದ್ದಾರೆಂಬ ಅಭಿಪ್ರಾಯವನ್ನು ವ್ಯತ್ಯಾಸಗೊಳಿಸಬೇಕಾಗಿದೆ. ಕಾಂಗ್ರೆಸು ಅಧಿಕಾರವನ್ನು ಕೇಂದ್ರೀಕರಿಸುವುದರಿಂದ ಫ್ಯಾಸಿಸ್ಟ್ ಮನೋವೃತ್ತಿಯುಂಟಾಗುವುದೆಂದು ಅವರು ತುಂಬಾ ಯೋಚಿಸಿ ಹೇಳಿಯೇ ಬಿಟ್ಟಿದ್ದಾರೆ. ಈ ಅನಿರೀಕ್ಷಿತ ಸಹಾನುಭೂತಿಗಾಗಿ ಕಾಂಗ್ರೆಸಿನವರು ನಗುತ್ತಿದ್ದಾರೆ. ಕಾಂಗ್ರೆಸಿನ ಕೀರ್ತಿಯನ್ನಳಿಸುವ ಕುರಿತು ಮಂದಪಕ್ಷೀಯರಿಗೆ ಇಷ್ಟೊಂದು ಅಭಿರುಚಿಯೇ?

ಹುಲಿ ಮತ್ತು ದನ ಒಂದೇ ಪಾತ್ರೆಯಿಂದ ನೀರು ಕುಡಿಯುವಂತಾಯಿತು!

. . . . . . .

ಎಂಥ ಕಾಲ ವಿಪರೀತವಿದು? ಯುರೋಪಿಯನ್ ಪ್ಲೇಂಟರರಿಗೆ ಮದ್ರಾಸಿನ ರಾಜಾಜಿಯವರು ಮಕ್ಕಳಿಗೆ ಪಾಠ ಕಲಿಸಿದಂತೆ ಕೆಲವು ಕಟುವಿಚಾರಗಳನ್ನು ಇತ್ತೀಚೆಗೆ ಹೇಳಿಬಿಟ್ಟರು. ನಿರ್ಭೀತವಾಗಿ ಅವರಂದರು: "ನಮ್ಮ ಮಜೂರರಿಗೆ ಮುಷ್ಕರ ಮಾಡಲು ಕಲಿಸಿದವರೇ ಪಾಶ್ಚಾತ್ಯರಾದ ನೀವುಗಳು. ನೀವು ನಮ್ಮ ಧರ್ಮವನ್ನು ಹಾಳುಮಾಡಿದ್ದೀರಿ. ಅದನ್ನು ಪುನರುದ್ಧಾರಗೊಳಿಸುವುದು ನಿಮ್ಮ ಕರ್ತವ್ಯವಾಗಿದೆ." ಇಷ್ಟೆಲ್ಲಾ ಭಾಷಣಮಾಡಿ ಪ್ಲೇಂಟರರ ಬೇಡಿಕೆಗೆ ಉತ್ತರವಿತ್ತದ್ದು ಹೀಗೆ: ನಿಮಗೆ ರಸ್ತೆಗಳನ್ನು ಮಾಡಿಸಿಕೊಡುವ ಬದಲು ಬಡಜನರ ದಾರಿದ್ರ್ಯವನ್ನು ತೊಲಗಿಸಲೇ ಹಣವಿಲ್ಲ. ಮೊದಲು ಬಡವರು; ಅನಂತರ ಧನಿಕರು"

ಆಹಾ! ಸಿಲಕ್ಕೂ 'ಶಿಲಕ್ಕೂ ಇರುವ ವ್ಯತ್ಯಾಸವೇ? ಕಾಂಗ್ರೆಸನ್ನು ಯುರೋಪಿಯನರು ಗೌರವಿಸುವುದಾದರೂ ಹೇಗೆ?' ವಿಧಿವಿಲಾಸವಿದು!

. . . . . . .

ಲಂಡನಿಗೆ ವಿಶ್ರಾಂತಿಗೆಂದು ಭಾರತದಿಂದ ಹೋಗುವವರು ಈಗ ಹೊಸ ಶುಶ್ರೂಷೆಯನ್ನು ಪಡೆಯಲಾರಂಭಿಸಿದ್ದಾರೆ. "ನಮ್ಮ" ವೈಸರಾಯರಾದ ಲಿನ್ಲಿತ್ಗೋ ಪ್ರಭುಗಳು ಇಂಗ್ಲೆಂಡಿಗೆ ಹೋಗಿ, ವೈಟ್‌ಹಾಲ್ ಆಸ್ಪತ್ರೆಯಲ್ಲಿ ಒಂದು ಕೋಣೆಯನ್ನು ತೆಗೆದುಕೊಂಡಿದ್ದಾರೆ. ಈಗ ಅವರು "ಝೆಟ್ಲೆಂಡ್ ಸಂಭಾಷಣೆ" ಯೆಂಬೊಂದು ತರಬೇತಿಯನ್ನು



ಜರ್ಮನಿಯ
ಪ್ರಚಾರ ಮಂತ್ರಿಗಳಾದ
**ಡಾ| ಗೇಬಲ್ಸ್‌ರವರು.**

ಪಡೆಯುತ್ತಲಿದ್ದಾರೆ. 'ಫೆಡರೇಶನ್ ವಾಯು ಮಾತ್ರೆ'ಗಳನ್ನು ಅವರು ಸೇವಿಸುತ್ತಿದ್ದಾರೆ. ವೈಸರಾಯರು ವಿಶ್ರಾಂತಿ ಪಡೆಯಲಿಕ್ಕಲ್ಲದೆ ಸರ್ವಥಾ ಫೆಡರೇಶನಿನ ಕುರಿತು ಮಾತುಕತೆ ನಡೆಸಲು ಇಂಗ್ಲೆಂಡಿಗೆ ಹೋದುದಲ್ಲ!

. . . . . . .

ಓ! ಇಸ್ಲಾಮಿನ ಗತವೈಭವವನ್ನು ಪುನಃ ಸಂಪಾದಿಸಲು ಮಿ. ಜಿನ್ನರು ಮಾಡುವ ಪ್ರಯತ್ನವನ್ನು ನೋಡಿದರೆ ಎದೆ 'ಧಸಕ್ಕೆ'ನ್ನುತ್ತದೆ ಸದ್ಯದಲ್ಲಿಯೇ ಜಗದ್ವಿಖ್ಯಾತ ಬರೆಹಗಾರರಾದ ಮಿ. ಯಚ್. ಜಿ. ವೆಲ್ಸ್‌ರವರು ಜಿನ್ನರ ಬಳಿಗೆ ಬಂದು 'ಇಸ್ಲಾಮಿನ ಮಹತ್ವ'ದ ಕುರಿತು ಕೆಲವು ಭಾಷಣಗಳನ್ನು ಕೇಳುವರೆಂದು ವಾರ್ತೆ ಹಬ್ಬಿದೆ ಮುಂದೆ ಅವರು ಇಸ್ಲಾಮಿನ ಕುರಿತು ಬರೆಯಬಹುದಾದ ಪುಸ್ತಕದಲ್ಲಿ ಒಂದೇ ಒಂದು ಶಬ್ದವನ್ನಾದರೂ ವಿರೋಧವಾಗಿ ಬರೆಯಲಿಕ್ಕಿಲ್ಲ. ಕಾರಣ—ಗಳ 'ಫ್ರೊಂಟ್'ಗಳಲ್ಲಿ ಒಂದು 'ಫ್ರೊಂಟ್' ಹೊರಗೆ ಬಂದು ಬಿಟ್ಟರೆ— ಅವರ ಪುಸ್ತಕದ ಪಾಡು ಏನಾಗಬಹುದೆಂದೂಹಿಸಿರಿ!

. . . . .

ಪಂಡಿತ ನೆಹರುಗಳು ಸಂಸ್ಥಾನ ಪ್ರಜೆಗಳ ಪರಿಷತ್ತಿನ ಅಧ್ಯಕ್ಷತೆಯನ್ನು ವಹಿಸುವರೆಂಬುದನ್ನು ಕೇಳಿ ಕೆಲವು ಸಂಸ್ಥಾನಗಳ ರಾಜರಿಗೆ ಬೇಸರವಾಗಿದೆಯಂತೆ. 'ನಾವು ನಮ್ಮ ಸಂಸ್ಥಾನಗಳ ಪ್ರಜೆಗಳಿಗೆ ಪ್ರಾತಿನಿಧ್ಯವುಳ್ಳ ಶಾಸನಸಭೆಗಳನ್ನು ಕೊಡುತ್ತೇವೆ. ಪ್ರಾಯ ಬಂದವರಿಗೆ ಮತದಾನ ಹಕ್ಕು ಕೊಡುತ್ತೇವೆ. ಮನುಷ್ಯರಿಗೆ, ಹೆಚ್ಚೇಕೆ ಸಂಸ್ಥಾನಗಳ ಪ್ರಾಣಿಗಳಿಗೂ ಕೂಡಾ ನಾಗರಿಕ ಹಕ್ಕು ಕೊಡುತ್ತೇವೆ. ಆದರೆ ಆ ಜವಾಹರಲಾಲರು ಅಧ್ಯಕ್ಷರಾಗುವುದೇಕೆ? ಅವರು ನಮ್ಮನ್ನು ಅಸಂತೋಷಕ್ಕೀಡುಮಾಡುತ್ತಾರೆ. ಈಗಾಗಲೇ ಅವರು ನಮ್ಮನ್ನು 'ತೆರಿಗೆ ಸಂಗ್ರಹಕರು' 'ಜಮೀನ್ದಾರರು' ಬ್ರಿಟಿಷ್‌ರಾಜರ ಪ್ರಾಣಿಗಳು' ಎಂದು ಕರೆದಿದ್ದಾರೆ. ನಾವು ಸೂರ್ಯ ಚಂದ್ರವಂಶದವರೆಂಬುದು ಅವರಿಗೆ ತಿಳಿದಿಲ್ಲವೆ? ಕಾಲದೋಷವಿದು. ರಾಜರ ಮಾತುಗಳಿವು.

. . . . . . .

ಜನತಾ ಸಂಪರ್ಕ ಚಳವಳದೊಡನೆ ಧ್ವಜ ಸಂಪರ್ಕ ಚಳವಳವು ಪ್ರಾರಂಭವಾಗಿದೆ. ಕಾಂಗ್ರೆಸ್ ಧ್ವಜ, ಮುಸ್ಲಿಮ್ ಲೀಗ್ ಧ್ವಜ! ಇಷ್ಟು ಮಾತ್ರವಲ್ಲ, ಹಿಂದೂ ಮಹಾಸಭೆಯೂ ತನ್ನ ಧ್ವಜಗಳನ್ನೇರಿಸಲು ಪ್ರಾರಂಭಿಸಿದೆ. ಇಷ್ಟೇ ತಾನೆ? ಮಹಾವೀರದ
ಸಮಾಜ ಧ್ವಜ,
ಧ್ವಜಗಳು?
ಎಚ್ಚೆತ್ತು ಕಾ

# ಸರವಾದಾಗ ನನಗೆ ಬರೆಯಿರಿ.

**ಶ್ರೀ. ವರದನಾಯಕ್, ಮಂಗಳೂರು**

'ಸರ್ದಾರ್ ವಲ್ಲಭಭಾಯೀ ಪಟೇಲರು ಇತ್ತೀಚೆಗೆ ನವರಾಜ್ಯ ಘಟನೆಯ ಕುರಿತು ಮಾತಾಡುತ್ತಾ—'ಘಟನೆಯ ಯೋಗ್ಯಾಯೋಗ್ಯತೆಯನ್ನು ಕಾಂಗ್ರೆಸ್ ಅರಿತಿದ್ದರೂ, ನವರಾಜ್ಯಾಂಗ ರಚನೆಯ ಮೇರೆಗಳನ್ನು ವಿಸ್ತರಿಸುವ ಸ್ಪಷ್ಟವಾದ ಅಭಿಪ್ರಾಯದಿಂದಲೇ ಅದನ್ನು ಸ್ವೀಕರಿಸಲಾಗಿದೆ'ಯೆಂದು ಹೇಳಿದರು. ಪಾರ್ಲಿಮೆಂಟರಿ ಸಬ್ ಕಮಿಟಿಯ ಅಧ್ಯಕ್ಷರೇ ಹೀಗಂದಿರುವುದನ್ನು ನೋಡುವಾಗ ಘಟನೆಯನ್ನು ಮಣ್ಣುಗೂಡಿಸುವುದೆಂದು ಹೇಳಿರುವುದನ್ನು ಸಂಪೂರ್ಣವಾಗಿ ಮರೆತು ಅದರ ಮೇರೆಗಳನ್ನು ವಿಸ್ತರಿಸುವ ಕಾರ್ಯದಲ್ಲಿ ಕಾಂಗ್ರೆಸ್ ಧುರೀಣರು ನಿರತರಾಗಿದ್ದಾರೆಂದು ನಿಮಗೆ ಹೊಳೆಯುವುದಿಲ್ಲವೆ?'

ಸರ್ದಾರ್ ವಲ್ಲಭಭಾಯಿಯವರು ಹಾಗೆ ಹೇಳುವುದರಲ್ಲಿ ತುಂಬಾ ಅರ್ಥವಿರಬಹುದು. ನವರಾಜ್ಯ ಘಟನೆಯಲ್ಲಿ ಕೊಟ್ಟ ಸುಧಾರಣೆಯು ನಮಗೆ ಸಾಲದೆಂದೇ ನಾವು ಅದನ್ನು ವಿರೋಧಿಸುವುದು ಅದನ್ನು ಮುರಿಯದೆನೇ ಹಿಂದುಸ್ಥಾನವನ್ನು ತೃಪ್ತಿಪಡಿಸುವಷ್ಟು ವಿಸ್ತಾರಕ್ಕೆ ಆ ರಾಜ್ಯ ಘಟನೆಯನ್ನು ಕೊಂಡು ಹೋಗಲಿಕ್ಕೆ ಸರ್ದಾರ್ ಪಟೇಲರಿಗೆ ಸಾಧ್ಯವಾಗುವುದಾದರೆ ನೀವೇಕೆ ಬೇಸರಪಡಬೇಕು?

೦ ೦ ೦

[illegible] ಯಸ್.

...ರಾದ ಶ್ರೀ. ಪಿ. ರಾಮಮೂರ್ತಿಯ ಮಲ್ಯರನ್ನು ಸಮತಾವಾದಿ ಪಕ್ಷಕ್ಕೆ ಸೇರುವರೆ ಅರ್ಜಿ ಹಾಕಿರುವರೆಂದು ಪ್ರಭಾತ ಪತ್ರಿಕೆಯಲ್ಲಿಯೂ ಬಂದಿತ್ತು. ನಿಮ್ಮ ಕಳೆದ ಸಂಚಿಕೆಯಲ್ಲಿಯೂ ಸಮತಾವಾದ ಪಕ್ಷಕ್ಕೆ ಸೇರಬೇಕೆಂಬ ಶರ್ತವನ್ನು ಶ್ರೀ. ಮಲ್ಯರಿಗೆ ಹಾಕಲಾಗಿದೆಯೆಂದು ಆಧಾರರಹಿತ ಸುದ್ದಿಯಲ್ಲಿ ಪ್ರಕಟವಾಗಿತ್ತು. ಈಗ ಶ್ರೀ. ಮಲ್ಯರ ಹೇಳಿಕೆಯನ್ನು ನೋಡುವಾಗ ಎಲ್ಲವೂ ಸಮತಾವಾದಿ ಪಕ್ಷದ ಕಾರ್ಯದರ್ಶಿಗಳ ಹುಡುಗಾಟಿಕೆಯೆಂದು ಗೊತ್ತಾಗುತ್ತದೆ. ಇಂಥ ಮಕ್ಕಳಾಟಿಕೆಯನ್ನು ಜವಾಬ್ದಾರಿಯನ್ನರಿತಿರಬೇಕಾದ ಪಕ್ಷದ ಕಾರ್ಯದರ್ಶಿಯರು ಮಾಡುವುದು ನ್ಯಾಯವೆ?'

ನೀವು ಒ[illegible] ವಿಶ್ವಾಸವಿಡಬಹುದು. [illegible]ರ್ಯದರ್ಶಿಯವರು ತನ್ನ ಪಕ್ಷದ ಕಾರ್ಯಗಳ ರೀತಿ ನೀತಿಯನ್ನು ಮಿಕ್ಕಿ ಹೋಗಲಿಕ್ಕಿಲ್ಲ. ಕಾಲ, ಸಂದರ್ಭ, ಪರಿಸ್ಥಿತಿಗಳಿಗನುಸಾರವಾಗಿ ಸದಸ್ಯರುಗಳನ್ನು ಸೇರಿಸುವಾಗ ಹೀಗೂ ಮಾಡಬೇಕಾಗುತ್ತದೆ ಎಂದು ನೀವು ತಿಳಿದುಕೊಂಡರಾಯಿತು. ಇದಕ್ಕೆ ಇನ್ನಷ್ಟು ರುಜುವಾತುಗಳು ಬೇಕಾದರೆ ಪಕ್ಷದ ಬೇರೆ ಸದಸ್ಯರ ವಿಷಯವನ್ನೂ ನೀವೇ ವಿಚಾರಿಸಿ ತಿಳಿದುಕೊಳ್ಳಿ

೦ ೦ ೦

**ರಾಮಚಂದ್ರ ರಾವ, ಬೆಳಗಾವ.**

"ಕರ್ನಾಟಕದ ಮೇಂಬರರೂ, ಮುಂಬಯಿಯ ಆರ್ಥಿಕ ಮಂತ್ರಿಗಳೂ ಆದ ನಾ. ಎ. ಬಿ. ಲಠ್ಠೆಯವರು ಕರ್ನಾಟಕವು ಪ್ರತ್ಯೇಕ ಪ್ರಾಂತವಾಗುವುದು ಆರ್ಥಿಕ ದೃಷ್ಟಿಯಿಂದ ವ್ಯವಹಾರ್ಯವಲ್ಲವೆಂಬ ಹೇಳಿಕೆ ಕೊಟ್ಟಿದ್ದಾರೆ. ಕನ್ನಡಿಗರೇ ಹೀಗೆ ಕರ್ನಾಟಕ ಪ್ರಾಂತ ನಿರ್ಮಾಣಕ್ಕೆ ಅಡ್ಡಗಾಲು ಹಾಕಿದರೆ ಹೇಗೆ? ಕರ್ನಾಟಕವು ಪ್ರತ್ಯೇಕವಾದರೆ ಆರ್ಥಿಕ ಸಂಪತ್ತು ಸಾಕಾಗಲಾರದೆಂದು ಅವರಿಗೆ ಹೇಗೆ ಗೊತ್ತಾಯಿತು?"

ಪ್ರಾಯಶಃ ಕರ್ನಾಟಕ ಪ್ರಾಂತ್ಯವು ಪ್ರತ್ಯೇಕವಾದರೆ ತಾನು ಅದರಲ್ಲಿ ಆರ್ಥಿಕ ಮಂತ್ರಿಯಾಗಲಾರನೆಂದು ಅವರಿಗೆ ಈ ಮೊದಲೇ ಗೊತ್ತಾಗಿರಬೇಕು. ಆ ಆಧಾರದ ಮೇಲಿಂದಲೇ ಕರ್ನಾಟಕವು ಬೇರೆ ಪ್ರಾಂತ್ಯವಾಗುವುದು ಆರ್ಥಿಕ ದೃಷ್ಟಿಯಿಂದ ಹಿತವಲ್ಲವೆಂದು ಅವರು ಹೇಳಿರಬೇಕು. ತನ್ನ ಸ್ವಂತ ಅಭಿಪ್ರಾಯವನ್ನು ಕೊಡುವ ಹಕ್ಕನ್ನು ಅವರಿಂದ ಸೆಳೆದೊಯ್ಯಲು ಸಾಧ್ಯವಿದೆಯೆ?

೦ ೦ ೦

**ಪಿ. ಶ್ರೀನಿವಾಸ್, ಬೆಂಗಳೂರು.**

ಕಾಂಗ್ರೆಸು ಸರಕಾರವು ಮಾಡಿದ ಸಾಲ ಸಿರೋಧ ಮಸೂದೆಯಿಂದ ರೈತರಿಗೆ ಅನುಕೂಲವಾದರೂ, ಬಡ್ಡಿ ಕಡಿಮೆ ಮಾಡಿದುದರ ಪರಿಣಾಮವಾಗಿ ಹಣಗಾರನು ಹಣವನ್ನು ಕಮ್ಮಿ ಬಡ್ಡಿಗೆ ಕೊಡಲು ಇಷ್ಟವಿಲ್ಲದೆ ಇರುವುದರಿಂದ ಮಾಡಿದ ಸಾಲವನ್ನು ತೀರಿಸಲಿಕ್ಕೆ ರೈತರಿಗೆ ಎಲ್ಲಿಂದ ಹಣ ಸಿಗಬೇಕು? ಈ ವಿಚಾರದಲ್ಲಿ ಸರಕಾರದವರು ಯಾವ ಅನುಕೂಲ ಪಡಿಸಿರುವರು?

ಸರಕಾರವು ಯಾವ ಅನುಕೂಲವನ್ನೂ ಪಡಿಸಿಲ್ಲ. ಹಾಗೆಯೇ

ಹಣವಂತರೂ ಯಾವ ಬೇಸರವನ್ನೂ ಹಚ್ಚಿಕೊಂಡಿಲ್ಲ. ಲೋಕದಲ್ಲಿ ಎಂತಹ ಸತ್ಯಾಗ್ರಹವಾದರೂ ನಡೆಯಬಹುದು; ಆದರೆ ಹಣವಂತರು ತಮ್ಮ ಹಣಕ್ಕೆ ಬಡ್ಡಿ ಕಡಿಮೆಯೆಂದು ಹಣ ಸಾಲಕೊಡದ ಮುಷ್ಕರ ಹೂಡಿಯಾರೆಂದು ನೀವು ಹೆದರಿಕೊಳ್ಳಬೇಡಿ. ಬದಲಾಗಿ ಸಾಲ ಕೊಟ್ಟವರೂ ತೆಗೆದುಕೊಂಡವರೂ ಸೇರಿ ಹೊಸ ಹೊಸ ಉಪಾಯಗಳನ್ನು ಮಾಡುತ್ತಿದ್ದಾರೆ. (ಉದಾ: ೫೦ ರೂಪಾಯಿ ಕೊಟ್ಟು ೧೦೦ ರೂಪಾಯಿಗಳಿಗೆ ನೋಟು ಬರೆಸಿಕೊಳ್ಳುವದು. ಬಡ್ಡಿ ೫ ಸಲೆ)

○ ○ ○

**ನನ್ನ ಅಭಿಪ್ರಾಯದಲ್ಲಿ ಮೇಲಿನ ಮಸೂದೆಯನ್ನು ಜಾರಿಗೆ ತರುವಾಗಲೇ ಜತೆಯಲ್ಲಿಯೇ ಆಸ್ತಿಮೇಲಿನ ಜವಾಬ್ದಾರಿಯಿಂದ ರೈತನಿಗೆ ಕಮ್ಮಿ ಬಡ್ಡಿಯಲ್ಲಿ ಸಾಲಕೊಡುವ ಏರ್ಪಾಡನ್ನು ಸರಕಾರದವರೇ ಮಾಡಿದ್ದಲ್ಲಿ ಬಂಡವಾಳಗಾರನ ಬಡ್ಡಿಯ ದಾಹವು ಅಡಗುವುದರಲ್ಲಿ ಸಂದೇಹವಿಲ್ಲ. ಹಾಗೆ ಮಾಡುವುದಾದರೂ ಪ್ರತಿಯೊಂದು ತಾಲೂಕಿಗೂ ಒಂದೊಂದು ಆಫೀಸು ಬೇಕೇ ಬೇಕು.**

ಸರಕಾರವು ಕಾನೂನು ಮಾಡುವಾಗಲೇ ನಿಮ್ಮ ಅಭಿಪ್ರಾಯವನ್ನು ಕೇಳದಿದ್ದುದೂ ತಪ್ಪು; ನೀವು ಆಗ ಹೇಳದೆ ಈಗ ಹೇಳುವುದೂ ತಪ್ಪು. ಮದ್ರಾಸ್ ಪ್ರಾಂತ್ಯದ ರೈತರಿಗೆ ಒಟ್ಟಿಗೆ ಎಷ್ಟು ಸಾಲವಿತ್ತು? ಹೊಸ ಕಾನೂನಿನಂತೆ ಎಷ್ಟು ಉಳಿದಿದೆಯೆಂಬ ಅಂಕೆ ಸಂಕೆಗಳನ್ನು ಸಂಗ್ರಹಿಸಿ ಮದ್ರಾಸ್ ಸಂಸ್ಥಾನದ ಪ್ರಜೆಗಳ ಪರವಾಗಿ ನೀವು ಒಂದು ಪ್ರಾತಿನಿಧ್ಯವನ್ನು ಮದ್ರಾಸ್ ಸರಕಾರದ ಮುಂದೆ ತಂದರೆ ನಾವೆಲ್ಲಾ ಕೈಲಾದಷ್ಟು ಸಹಾಯಮಾಡುವ ಭರವಸೆ ಕೊಡುತ್ತೇವೆ. ಅಂಕೆ ಸಂಖ್ಯೆಗಳ ಆಧಾರದ ಮೇಲೆ ತಾಲೂಕಿಗೊಂದು ಆಫೀಸು ಬೇಕೋ ಬೇಡವೋ ಎಂಬುದನ್ನು ಮತ್ತೆ ನೋಡೋಣ.

○ ○ ○

**ವೇಶ್ಯಾವೃತ್ತಿಯನ್ನು ಕಡಿಮೆಮಾಡಲು ಮುಖ್ಯ ದಾರಿಗಳಾವುವು? ನಿಮ್ಮ ಜಿಲ್ಲೆಯಲ್ಲಿ ಯಾವ ಕ್ರಮವನ್ನು ಅನುಸರಿಸಿದ್ದೀರಿ? ಇದಕ್ಕೆ ಸಮಾಜದ ಸಹಾಯವು ಅತ್ಯಗತ್ಯವಲ್ಲವೇ?**

ಬಹಳ ಗಹನವಾದ ಪ್ರಶ್ನೆಯನ್ನು ಕೇಳಿಬಿಟ್ಟಿದ್ದೀರಿ. ವೇಶ್ಯಾವೃತ್ತಿಯನ್ನು ಕಡಮೆ ಮಾಡಲು ನಮಗೊಂದು ಉಪಾಯವು ಹೊಳೆಯುತ್ತದೆ. ಅವರಲ್ಲಿ ಕೆಲವರನ್ನು ನಮ್ಮಂಥವರು ಮದುವೆಯಾಗಬೇಕು.

ನಮ್ಮಲ್ಲಿಯ ಕೆಲವು ತರುಣರು ಈಗಾಗಲೆ ವೇಶ್ಯೆಯರ ಮನೆಗಳನ್ನು ಸಂದರ್ಶಿಸಿ ಬೇಕಾದ ಅನುಭವಗಳನ್ನು ಪಡೆಯುತ್ತಿದ್ದಾರೆ. ಅವರು ಸಂಗ್ರಹಿಸಿದ ಅಂಕೆ ಸಂಖ್ಯೆಗಳು ಹೊರಗೆ ಬಂದ ಕೂಡಲೆ ಈ ವಿಷಯ ನಿರ್ಧಾರಗಳನ್ನು ಮಾಡುವುದರಲ್ಲಿದ್ದಾರೆ.

ಸಮಾಜವು ಬಹಳ ಉದಾರವಾದುದು. ಈ ವರೆಗೆ ವೇಶ್ಯಾವೃತ್ತಿಗೆ ಮಾಡಿದ ಸಹಾಯವನ್ನೇ ವೇಶ್ಯಾವಿವಾಹಕ್ಕೂ ಮಾಡದಿರಲಾರದು.

ಅದಿರಲಿ. ವೇಶ್ಯಾವೃತ್ತಿಯನ್ನು ಕಡಿಮೆ ಮಾಡಬೇಕೆಂದಷ್ಟೇ ನೀವು ಸೂಚಿಸಲು ಕಾರಣವೇನು? ಅದನ್ನು ನಿಲ್ಲಿಸಿಬಿಡಲು ನಿಮ್ಮ ಒಪ್ಪಿಗೆ ಇಲ್ಲವೇ?

———

ADVERTISE
in
Antaranga

ಶಾಂತಿನಿಕೇತನ ಹಾಯರ್ ಎಲಿಮೆಂಟರಿ ಶಾಲೆ
ಕುರಾಡಿ (ದ. ಕನ್ನಡ.)
ನಿಮ್ಮ ಮಕ್ಕಳನ್ನು ನವಯುಗದ ನವೀನ ವಿದ್ಯೆಯು, ನವತರುಣರನ್ನಾಗಿ ಮಾಡಲು ನವೀನ ರೀತಿಯ ವೈಜ್ಞಾನಿಕ ವಿದ್ಯೆಯು, ವೈಭವದ ಬೀಡಾದ
ಶಾಂತಿನಿಕೇತನ ಹಾಯರ್ ಎಲಿಮೆಂಟರಿ ಶಾಲೆ ಕುರಾಡಿ
ಇಲ್ಲಿಗೆ ಇಂದೇ ಕಳುಹಿಸಿರಿ
ಹೊಸ ಕ್ಲಾಸುಗಳು ಪ್ರಾರಂಭವಾಗಿವೆ.

# ಮಗುವಿಗೆ ಮೊಲೆ ಹಾಲು!

ನಗೆ ಬರಹ ಬರಹಗಾರ: 'ಅಚ್ಚು ಕಟ್ಟಿನವ'

ಸರಿ. ನನ್ನೀ ಹರಟೆಗೆ ಹೆಸರು ಹಾಕಿದ್ದೇನೆ ಮಾತ್ರ. ಇನ್ನು ಅದನ್ನು ಅವಸರವಸರದಿಂದ 'ಮಗುವಿಗೆ ಮೊಲೆ ಹಾಲು' ಎಂದು ಓದಿ ಬಿಟ್ಟು, ಕಳದ ಶತಮಾನದವರೆನ್ನಿಸಿಕೊಳ್ಳಬೇಡಿ. ಎಲ್ಲ ಉಚ್ಚಾರವನ್ನು ಹೊಂದಿಕೊಂಡುಂಟು ನೋಡಿ. ಇದಕ್ಕೆ ದೃಷ್ಟಾಂತವಾಗಿ ನಾಣು (ನಾನು ಅಲ್ಲ—ಇಲ್ಲಿಯೂ ಉಚ್ಚಾರದ ಕಡೆಗೆ ಲಕ್ಷ್ಯವಿರಲಿ) ನನ್ನೊಡನೆ ಹೇಳಿದ ಒಂದು ಕತೆಯನ್ನು ಹೇಳುತ್ತೇನೆ, ಕೇಳಿ. ಸೇಲಮಿನಲ್ಲಿ ಪಾನನಿಷೇಧವು ಜಾರಿಗೆ ಬಂದಿರುವದು ಗೊತ್ತುಂಟಷ್ಟೆ. ಅಲ್ಲಿ ಮೊನ್ನೆ ಸಬ್ ಇನ್ಸ್ಪೆಕ್ಟರರೊಬ್ಬರು ಡ್ಯೂಟಿಯಲ್ಲಿದ್ದವರಿಗೆ ಏನೋ ಅನುಮಾನ ತೋರಿ, ಹಾದಿಹೋಕ ಸ್ವಾಬನೊಬ್ಬನೊಡನೆ 'ಓ ಅವ ಹೊತ್ತು ಕೊಂಡು ಹೋಗುವದೇನು?' ಎಂದು ಕೇಳಿದರಂತೆ. 'ಅಂವ ಕಳ್ಳು ಹೊತ್ತಿದ್ದಾಣೆ ಸಾಮಿ' ಎಂದರಂತೆ ಸಾಯ್ಬರು. 'ಹ್ಞಾಂ' ಎಂದವರೇ ಓಡಿಹೋಗಿ ಆ ಹೊತ್ತವನನ್ನು ಹಿಡಿದು ನೋಡುವಾಗ ಅವ ಹೊತ್ತದ್ದು ಕಳ್ಳು ಅಲ್ಲ, ಕಲ್ಲು! ಇನ್ಸ್ಪೆಕ್ಟರರು ಯೋಚಿಸಿದರು—ಆ ಸಾಯ್ಬ ಕಲ್ಲು ತೆಗೆದು ಕಳ್ಳುಮಾಡಿದ. ತೆಂಗು, ತಾಳೆ, ಗೇರು ಮೊದಲಾದುವುಳಿಂದ ಕಳ್ಳುಮಾಡಬಾರದೆಂಬ ಕಾನೂನಿದೆಯಾದರೂ ಈ ರೀತಿ ಕಲ್ಲು ತೆಗೆದು ಕಳ್ಳು ಮಾಡುವದಕ್ಕೆ ಕಾನೂನಿನ ನಿಷೇಧವಿಲ್ಲವೆಂಬುದನ್ನು ಆಲೋಚಿಸಿ ತಿಳಿದು, ನಂಬ್ರ ಬಿಟ್ಟು ಬಿಟ್ಟರಂತೆ! ಉಚ್ಚಾರದ ಮಹಾತ್ಮೆಯನ್ನು ತಿಳಿಸುವದಕ್ಕಾಗಿ ಈ ಕತೆ ಹೇಳಿದೆ. ಇರಲಿ; ನಾನು ಈಗ ಹೇಳಿದುದು 'ಮಗುವಿಗೆ ಮೊಲೆ ಹಾಳು' ಎಂದಲ್ಲವೆ? ಹೌದು.

ಸತ್ಯಕ್ಕೂ ಮಗುವಿಗೆ ಮೊಲೆ ಹಾಳು. ಆದರೆ ಅದು ಈ ಕಾಲದ ತಾಯಂದಿರಿಗೆ ಹೊರತು ಮಕ್ಕಳಿಗೇನು ಗೊತ್ತಾಗುತ್ತದೆ? ಮೊನ್ನೆ ಅಷ್ಟಮಿಯ ದಿನ ಹುಟ್ಟಿದ ನಮ್ಮ ಶ್ರೀ. ಕೃಷ್ಣನಿದ್ದಾನಲ್ಲಾ—ಅವನಿಗಾದರೆ ಗೊತ್ತಿತ್ತು. ಆದ್ದರಿಂದಲೇ ಅವ ಹೆತ್ತ ತಾಯಿಯ ಮೊಲೆಯನ್ನು ಒಂದೇ ಒಂದು ದಿನವಾದರೂ ತಿನ್ನಲಿಲ್ಲ. ತಾಯಿಯನ್ನು ರಕ್ಷಿಸುವ ಮಕ್ಕಳ ಬುದ್ಧಿಯೆಂದರೆ ಹೀಗೆ! ಭೂಮಿಗೆ ಬಿದ್ದು ಕಣ್ಣು ಬಿಟ್ಟಲಾಗಾಯಿತು ಬೇರೆ ಮಗುವಿನ ತಾಯಿಯ ಮೊಲೆಯುಂಡೇ ದೊಡ್ಡವನಾದುದು ಹೊರತು, ತನ್ನ ತಾಯಿಯ ಮೊಲೆಗೆ ಬಾಯಿಯಿಟ್ಟವನಲ್ಲ ನಮ್ಮ ಕೃಷ್ಣ! ಈಗಿನ ಮಕ್ಕಳಿಗೆ, ಮೊಲೆಕೊಡಬೇಕೆಂದು ಅಳುವದಕ್ಕೆ ಗೊತ್ತು ಹೊರತು ಅದರಲ್ಲಿ ಎಂಥಾ ಹಾಳು



ಉಂಟೆಂಬುದು ಅವುಗಳಿಗೇನುಗೊತ್ತುಂಟು ಪಶುಜಾತಿಗೆ? ನೀವು ಏನೂ ಆಲೋಚನೆ ಮಾಡದೆ ಸುಮ್ಮ ಸುಮ್ಮಗೆ ಈಗಿನ ತರುಣಿಯರನ್ನು ದೂರಬೇಡಿ. 'ಹೋಯಿತಪ್ಪಾ ಈಗಿನವರ ಫೇಶನಿನಿಂದ! ಮಗುವಿಗೆ ಮೊಲೆಕೊಡಲಿಕ್ಕೇನು ಧಾಡಿಯಿವರಿಗೆ? ಹಿಂದಿನವರೆಲ್ಲಾ ಹೀಗೆಯೇ ಮಾಡುತ್ತಿದ್ದರೆ?' ಎಂದು ಅನಾವಶ್ಯಕ ಅವರನ್ನು ಜರೆಯಬೇಡಿ. ನಮ್ಮ ಈಗಿನ ತರುಣಿಯರೆಂದರೆ ಹಿಂದುಮುಂದಿನ ಆಲೋಚನೆಯಿಲ್ಲದೆ ಹಾಗೆಲ್ಲಾ ಮಾಡುವವರಲ್ಲ. ಮಗುವಿಗೆ ಮೊಲೆಕೊಟ್ಟು ಹಿಂದಿನವರಿಗೆ ಆದ ಅವಸ್ಥೆ ಅವರಿಗೆ ಗೊತ್ತಿದೆ. ಆ ಪೂತನಿಯಲ್ಲವೇ ಕೃಷ್ಣನಿಗೆ ಮೊಲೆಕೊಟ್ಟದ್ದು? ಅವಳಿಗಾದದ್ದು ನಿಮಗೆ ಮರೆತುಹೋಗಿರಬಹುದು; ಅವಳ ಕಡೆಯವರಾದ ಈ ನವ ಯುವತಿಯರು ಮಾತ್ರ, ಅದನ್ನು ಮರೆತು ಬಿಟ್ಟು ಅವಳಂತೆಯೇ ತಾವೂ

ಆಗಲಿಕ್ಕೆ ತಯಾರಿಲ್ಲ ನೋಡಿ. ''ಪೂತನಿ ಕೃಷ್ಣನನ್ನು ಕೊಲ್ಲಬೇಕೆಂದು ಮೊಲೆಕೊಟ್ಟಳು ಆದ್ದರಿಂದಲೇ ಕೃಷ್ಣ ಅವಳನ್ನು ಕೊಂದ'' ಹೀಗಲ್ಲವೇ ನಿಮ್ಮ ವಾದ? ಒಟ್ಟಾರೆ ಸ್ತ್ರೀಜಾತಿಗೆ ಹೇಗೆಮಾಡಿದರೂ ಅಪವಾದ ತಪ್ಪಲಿಕ್ಕಿಲ್ಲಪ್ಪಾ! ಹಾಗೆ ಕೃಷ್ಣನನ್ನು ಕೊಲ್ಲಬೇಕೆಂಬ ಮನಸ್ಸಿದ್ದರೆ, ಕೊಂಡು ಹೋಗಿಮೊಲೆಯನ್ನು ಅವನ ಬಾಯಿಗೆ ಇಡುವದಕ್ಕಿಂತ, ಈಗಿನವರಂತೆ ಹಾಲು ತುಂಬಿದ ಗ್ಲಾಸನ್ನೇ ಅವನ ಬಾಯಿಗೆ ತುರುಕಿಸುತ್ತಿದ್ದರೆ, ಅದರ ರಬ್ಬರಿನ ನಿಪ್‌ಲ್ ಅವನ ಗಂಟಲೊಳಗೆ ಸಿಕ್ಕಿ ಸಾಯುತ್ತಿದ್ದಿಲ್ಲವೆ? ಅವಳು ಆ ಕಾಲದವಳಾದ್ದರಿಂದ ಮೊಲೆಕೊಟ್ಟಳು; ಈಗಿನ ಮಕ್ಕಳಂತೆ ಕೃಷ್ಣ ಅವಳ ಜೀವ ತಿಂದುಬಿಟ್ಟ! ಅದು ಗೊತ್ತಿದ್ದೂ, ತಾಯಂದಿರು ಮಕ್ಕಳಿಗೆ ಮೊಲೆಕೊಡಬೇಕೆಂದು ಹೇಳುವವರೆಂತಹ ರಕ್ಕಸರಯ್ಯಾ?

ಡಾಕ್ಟರರೂ ಹೇಳುತ್ತಾರಂತೆ—'ಮಗುವಿಗೆ ಮೊಲೆ ಹಾಲು ಉತ್ತಮ' ಎಂದು. ಯಾವ ಆಧಾರದಿಂದ ಹೇಳುತ್ತಾರೋ ಯಾರಿಗೆ ಗೊತ್ತು? ನೋಡಿ, ಆ ನಾಗಿಗೆ ಮಗುವಿಗೆ ಮೊಲೆಕೊಡುವ ಅಭ್ಯಾಸವಿತ್ತು. ಹೀಗಾಗಿ ಮೊದಲನೇ ಮಗು ಮೊಲೆ ಬಿಡುವಕಾಲಕ್ಕೆ ಅವಳನ್ನು ನೋಡಿದರೆ, ಕಾಲಿನಿಂದ ತಲೆಯ ವರೆಗೆ ದರಗು ಕಾಗದ ಹಾಕಿ ಸಪಾಯಿಮಾಡಿದ ಹಲಗೆಯಂತೆ, ಮಟ್ಟ ಸರೀನಿಂತು, ನಂತರ ಆನಳ ಮೀಸೆ ಮೊಳೆಯುವ ಗಂಡ ಹತ್ತಿರ ಬಾರದೆ ಆ ಮೇಲೆ ಮಕ್ಕಳೇಇಲ್ಲ. ಆದರೂ ಮಕ್ಕಳಿಗೆಮೊಲೆ ಹಾಲು ಉತ್ತಮವೆಂದು ಡಾಕ್ಟರರು ಹೇಳುವದರ ಅರ್ಥವೇನಪ್ಪಾ? ಹಾಲಿನ ಬುಡ್ಡಿಯನ್ನು ಮಗುವಿನ ಬಾಯಿಗಿಟ್ಟುಹೋದಲ್ಲಿ, ಅದರ ನಿಪ್‌ಲ್ ಜಾರಿ ಗಂಟಲೊಳಗೆ ಸಿಕ್ಕಬಿಟ್ಟರೆ ಮಕ್ಕಳು ಸತ್ತುಹೋಗುವದುಂಟು. ನಮ್ಮ ಲೀಲಾ ಬಾಯಿಯ ಮೊದಲಿನ ಮಗು ಹಾಗೆಯೇ ಆಗಿತ್ತು. ಆದರೆ ಆ ದುಃಖವೇ ಗೊತ್ತಾಗದ ರೀತಿಯಲ್ಲಿ ಮರುವರ್ಷವೇ ಮತ್ತೊಂದು ಮಗುವಾಗಿದೆ. ಆ ನಾಗಿಯ ಹಾಗೆ ಒಂದು ಹೆತ್ತು ಬಂಜೆಯಾಗಲಿಲ್ಲ. ಹೀಗಿರುವಾಗ ಮಕ್ಕಳಿಗೆ ಮೊಲೆಕೊಡಬೇಕೆಂದು ಹೇಳುವದು ಹ್ಯಾಗೆ ಹೇಳಿ?

ಮಗುವಿನ ಮಟ್ಟಿಗೆ ಹೇಳುವುದಾದರೆ ಅದಕ್ಕೆ ಹಿಡಿದುಕೊಳ್ಳಲು ಗ್ಲಾಸು ಆಗುವದಿಲ್ಲವೆ? ಒಟ್ಟಾರೆ ಅದರ ಬಾಯಿಗೆ ಹಾಲು ಬಿದ್ದರೆ ಸರಿ. ಅವು ಬಾಲಚೇಷ್ಟೆಯಿಂದ ಎಷ್ಟು ಗ್ಲಾಸುಗಳನ್ನು ಒಡೆಯುತ್ತವೆ; ಎಷ್ಟು ನಿಪ್ಲ್‌ಗಳನ್ನು ಹರಿಯುತ್ತವೆ. ಪುನಃ ಪುನಃ ತಂದು ಕೊಟ್ಟರಾಯಿತು; 'ಅದಲ್ಲ, ಮೊಲೆಯನ್ನೇ ಕೊಡಬೇಕು' ಎನ್ನುವವರಿದ್ದಾರಲ್ಲಾ,– ಇವರು ಇನ್ನೊಂದು ಘಟನೆಯನ್ನು ತಯಾರಿಸಲು ಸಾಧ್ಯವೇ ಇಲ್ಲದಿರುವಾಗ 'ಈಗಿನ ನವರಾಜ್ಯ ಘಟನೆಯನ್ನು ಮುರಿದುಬಿಡೋಣ' ಎನ್ನುವ ಕಾಂಗ್ರೆಸಿನವರ ಜಾತಿಯವರೋ ನೋಡುತ್ತೇನೆ!

ಇನ್ನೂ ಈ ವಿಷಯ ಹೇಳಬಹುದಿತ್ತು. ಆದರೆ ನಮ್ಮ ಸಂಪಾದಕರು ತಡೆಹಾಕಿದ್ದಾರೆ. ''ತಮ್ಮ ಸೌಂದರ್ಯವನ್ನು ರಕ್ಷಿಸಿಕೊಳ್ಳಲು ನಮ್ಮ ಯುವತಿಯರು ತೆಗೆದುಕೊಂಡ ಮುಂಜಾಗ್ರತೆಯಿದು. ಅವರಿಂದ ಕಲಿತ ಪಾಠದ ಫಲವಾಗಿ, ನೀವೀ ಹರಟೆಯನ್ನು ಉದ್ದುದ್ದಕ್ಕೆ ಳೆದು ಅದರ ಸೌಂದರ್ಯವನ್ನು ಕೆಡಿಸಲು ನಾನು ಬಿಡಲಾರೆ'' ಎಂದರು ಸಂಪಾದಕರು. ನಾನು 'ತಥಾಸ್ತು' ಎಂದೆ. ನನ್ನ ಲೇಖನವೂ ಗಿಡ್ಡಾಗಿ ಅಚ್ಚುಕಟ್ಟಾಗಿ ಇರಲಿ!

---

ಉತ್ತಮ ತರದ ಸುವಾಸನೆಯುಳ್ಳ ಮತ್ತು ಲೋಕಪ್ರಸಿದ್ಧವಾದ

ಆನಂದ ಅಗರ ಬತ್ತಿ B 555 ಮತ್ತು REGD. ಆನಂದ ಚಂದನ ಬತ್ತಿ

ಇವುಗಳನ್ನೇ ಉಪಯೋಗಿಸಿರಿ.

ಆನಂದ ಪರ್ಫ್ಯೂಮರಿ ವರ್ಕ್ಸ್ ಅವಿನ್ಯೂರೋಡ್,
ಬೆಂಗಳೂರು ಸಿಟಿ

ಉಡುಪಿ ಸ್ಟಾಕಿಸ್ಟರು:— ಶ್ರೀ ಭಾರತ ವಸ್ತುಮಂದಿರ ತೇರಬೀದಿ.

# ಅಜೇಯವಾದ ಹಿಮಾಲಯ!

### ಪರ್ವತಾರೋಹಿಗಳು ಮುಂದಿನ ಬಾರಿ ಯಶಸ್ವಿಯಾಗುವರೆ?

ಹಿಮಾಲಯದ ನಿಗೂಢತೆಯನ್ನು ಬಯಲು ಮಾಡಲೆತ್ನಿಸುತ್ತಿರುವ ಅದೆಷ್ಟೋ ಪರ್ವತಾರೋಹಿಗಳಲ್ಲಿ ಹಲವರು ಈಗಾಗಲೇ ವಿಚಿತ್ರವಾದ ಗಿರಿಶಕ್ತಿಯ ಸೆಳೆತಕ್ಕೆ ಸಿಲುಕಿ ತಮ್ಮ ಸಾಹಸ ಜೀವನವನ್ನು ಚಿರಸ್ಥಾಯಿಯನ್ನಾಗಿ ಮಾಡಿದ್ದಾರೆ. ೧೯೨೨ರಲ್ಲಿ ಏಳು ಮಂದಿ ಆರೋಹಿಗಳು ಪರ್ವತಗಳೆಡೆಯಲ್ಲಿ ಮಾಯವಾದರು. ೧೯೨೪ರ ಆರೋಹಣಾ ಯತ್ನದಲ್ಲಿ ಮೆಲ್ಲರಿ ಮತ್ತು ಇರ್ವಿನ್ ಎಂಬಿಬ್ಬರು ತಮ್ಮ ಪ್ರಾಣಗಳನ್ನು ಕಳೆದುಕೊಂಡರು. ನಂಗ ಪರ್ವತದ ಹಿಮ ನದಿಗಳ ಸೆಳೆತದಿಂದ ನಾಲ್ಕು ಯುರೋಪಿಯನರೂ, ಆರು ಭಾರತೀಯರೂ ಮಡಿದರು. ಆರೋಹಿಗಳಲ್ಲಿ ಐವತ್ತಕ್ಕೊಬ್ಬರಂತೆ ಬದುಕಿ ಬರುವುದಿದ್ದರೂ ಮೊನ್ನೆ ಮೊನ್ನೆ ಮಿ| ಡಬ್ಲ್ಯು. ಯಚ್. ಟಿಲ್‌ಮೇನ್–ಅವರ ಪಂಗಡದವರು ನಂಗಪರ್ವತಾರೋಹಣ ಯತ್ನ ಮಾಡಿ, ಸೋತು ಸುಣ್ಣವಾಗಿ ಹಿಂತಿರುಗಿದರು. ಆದರೆ ಅವರು ನಿರಾಶರಾಗಲಿಲ್ಲ. ೧೯೩೪ರ ಅಪಘಾತದಲ್ಲುಳಿದ ಒಬ್ಬನೇ ಒಬ್ಬ ಜರ್ಮನನು ತನ್ನ ಹೊಸ ಮಿತ್ರರೊಂದಿಗೆ ಪುನಃ ಎವರೆಸ್ಟ್ ಅಥವಾ ನಂಗ ಪರ್ವತವನ್ನು ಏರಲು ಯತ್ನಿಸುತ್ತಿದ್ದಾರೆ. ಅಮೇರಿಕದೊಂದು ಪಕ್ಷವು ಕಾರಕೋರಮ್ ಪರ್ವತವನ್ನೇರಲು ಯತ್ನಿಸುತ್ತಿದೆ. ಇತ್ತೀಚೆಗೆ ಢಿಲ್ಲಿಯ ಭಾರತೀಯ ಹಿಮಾಲಯ ಪರ್ವತಾರೋಹಣ ಕ್ಲಬ್ಬಿನವರು ಕೂಡಾ ಸಿದ್ಧತೆಗಳನ್ನು ಮಾಡುತ್ತಿದ್ದಾರೆ ಈ ಜನರು ಅದೇಕೆ ಪರ್ವತಗಳನ್ನು ಏರಲೆತ್ನಿಸುವುದು? ಸಾವಿನ ಕೈಗಳು ಇವರ ಗಂಟಲನ್ನಮುಕುವುದರಲ್ಲಿದ್ದರೂ ಈ ವ್ಯಕ್ತಿಗಳು ಅತ್ಯುನ್ನತ ಶಿಖರಗಳನ್ನು ಏರುವುದರ ರಹಸ್ಯವಾದರೂ ಏನು? ಅದರಲ್ಲಿ ವಿಶೇಷವಾದೊಂದು ಅಭಿರುಚಿಯೇನಿದೆ?

೧೯೩೮ರ ಪರ್ವತಾರೋಹಿಗಳಲ್ಲೊಬ್ಬರಾದ ಮಿ| ಎಫ್. ಎಸ್. ಸ್ಮಿತ್ ಎಂಬವರು ‘‘ದಿ ಸ್ಪಿರಿಟ್ ಆಫ್ ದಿ ಹಿಲ್ಸ್’’ ಎಂಬ ಪುಸ್ತಕವನ್ನು ಬರೆದಿದ್ದಾರೆ. ಈ ಸ್ವಾರಸ್ಯದ ಪುಸ್ತಕದಲ್ಲಿ ಸ್ಮಿತ್‌ರವರು ತಮ್ಮ ಸ್ವಂತ ಅನುಭವವನ್ನು ವಿವರಿಸಿದ್ದಾರೆ.

‘‘ನನ್ನ ಮನೆಯ ಬಳಿಯಲ್ಲಿ ಸಾಮಾನ್ಯ ಎತ್ತರದ ಕಲ್ಲಿನ ಗೋಡೆಯೊಂದಿತ್ತು. ಚಿಕ್ಕಂದಿನಿಂದಲೇ ಅದನ್ನು ಹಾರಿ ಅದರ ಇನ್ನೊಂದು ಬದಿಯಲ್ಲಿ ಏನಿದೆಯೆಂಬುದನ್ನು ನೋಡುವ ಕುತೂಹಲವು ನನ್ನಲ್ಲಿತ್ತು.” ನಿಗೂಢವಾದುದನ್ನು ಕಂಡು ಜಗತ್ತಿಗೆ ತಿಳಿಸುವುದೇ ಪರ್ವತಾರೋಹಿಗಳ ಆಶೆ. ಚಿಕ್ಕಂದಿನಲ್ಲಿಯೇ ಇದ್ದ ಆಶೆಯು ದೊಡ್ಡದಾದಾಗ ಪರ್ವತಾರೋಹಣ ಮಾಡುವಂತೆ ಮಾಡಿತು. ಅಂದಿನ ಗೋಡೆಯು ಏಳು ಅಡಿ ಎತ್ತರವಾಗಿದ್ದರೆ ಇಂದು ಏರುವ ಪರ್ವತವು ೨೯೦೦೨ ಅಡಿ ಎತ್ತರವಾಗಿದೆ. ಮಿ| ಸ್ಮಿತ್‌ರವರು ಚಿಕ್ಕಂದಿನಿಂದಲೇ ಪರ್ವತಾರೋಹಣದ ಕುರಿತು ಪುಸ್ತಕಗಳಲ್ಲಿ ಓದುತ್ತಿದ್ದರು. ಅವರ ರಜಾದಿನಗಳು ಹೆಚ್ಚಾಗಿ ಗುಡ್ಡಗಳಲ್ಲಿಯೇ ಕಳೆಯಲ್ಪಡುತ್ತಿದ್ದುವು. ಯೌವನದ ಶಕ್ತಿಯು ಎತ್ತರವಾದ ಬೆಟ್ಟಗಳನ್ನು ಹತ್ತುವುದಕ್ಕೆ ವಿನಿಯೋಗಿಸಲ್ಪಡುತ್ತಿತ್ತು. ಎತ್ತರವಾಗಿದ್ದರೂ ಗುಡ್ಡಗಳನ್ನು ಜಯಿಸಬೇಕೆಂಬ ಆಶೆಯು ಅವರಲ್ಲಿ ಮೊದಲೇ ಹೆಚ್ಚಾಗಿತ್ತು.

ಅವರು ಬರೆದ ಪುಸ್ತಕಗಳನ್ನೋದುವಾಗ ನೈಸರ್ಗಿಕ ಸೌಂದರ್ಯವು ಸ್ಮಿತ್‌ರವರಿಗೆ ಪರಮ ಪ್ರಿಯವಾಗಿತ್ತೆಂದು ಸ್ಪಷ್ಟವಾಗುತ್ತದೆ. ವಿವಿಧ ಪರ್ವತಗಳನ್ನು ಹತ್ತುವಾಗ ಅವರು ಕಂಡ ದೃಶ್ಯಗಳನ್ನು ವರ್ಣಿಸಿರುವುದನ್ನು ನೋಡುವಾಗ ಅದೆಷ್ಟು ಅಭಿರುಚಿಯಿಂದ ಅವರು ನೈಸರ್ಗಿಕ ದೃಶ್ಯಗಳನ್ನು ಕಂಡಿರಬಹುದೆಂದು ವ್ಯಕ್ತವಾಗುತ್ತದೆ. ಮುಂಜಾನೆ, ಮುಸ್ಸಂಜೆ, ರಾತ್ರೆ ಹಗಲೆನ್ನದೆ ಅವರು ಪರ್ವತಗಳಲ್ಲಿದ್ದರು. ಬಿರುಗಾಳಿ ಬೀಸುವಾಗ, ಸೂರ್ಯನು ಕಂತುವಾಗ, ಉದಯಿಸುವಾಗ

ಮತ್ತು ಮುಸ್ಸಂಜೆಗೆ ಪರ್ವತಗಳ ದೃಶ್ಯಗಳು ಹೇಗಿರುತ್ತವೆಂದು ಅವರು ಹೇಳಿದ್ದಾರೆ. ಆ ಪುಸ್ತಕವು ಎಷ್ಟುರವರೆಗೆ ಸ್ವಾರಸ್ಯವಾದುದೆಂದರೆ ಅರ್ಧಓದಿ ಮುಗಿಸುವುದರೊಳಗೆಯೇ ಯಾವುದಾದರೊಂದು ಗುಡ್ಡಕ್ಕೆ ನಡೆದುಬಿಡುವಾ ಎಂದನಿಸುತ್ತದೆ.

ಗುಡ್ಡಗಳಲ್ಲಿ ಅವರು ಕಂಡಿರುವುದು ಕೇವಲ ನೈಸರ್ಗಿಕ ದೃಶ್ಯಗಳಲ್ಲ. ಪರ್ವತಗಳಲ್ಲಿ ಸಾವು ಸದಾ ನಿಮ್ಮ ಬೆನ್ನ ಹಿಂದೆಯೇ ಬರುವುದು. ಕಾಲನ್ನು ಒಂದಡಿ ಮುಂದಿಟ್ಟರೆ ಅವಸಾನ ಕಾಲ ಬಂದಂತೆಯೇ. ಅಂತಹ ದುಃಸ್ಥಿತಿಗಳನ್ನು ಪರ್ವತಾರೋಹಿಗಳು ಅನುಭವಿಸ ಬೇಕಾಗುತ್ತದೆ. ಮಿ| ಸ್ಮಿತ್‌ರವರ ಪುಸ್ತಕದ ಕೆಲವು ಅಧ್ಯಾಯಗಳು ಎಂತಹ ಸಾಹಸಮಯ ಕಾದಂಬರಿಗಿಂತಲೂ ಮಿಗಿಲೆನಿಸುತ್ತವೆ.

ಪರ್ವತಾರೋಹಿಗಳ ಸಾಹಸಮಯ ಜೀವನದಲ್ಲಿ ಸದಾ ನೆನಪಿನಲ್ಲಿಡಬೇಕಾದ ಒಂದು ವಿಚಾರವೆಂದರೆ ಅವರ ಸಂಗಾತಿಗಳೊಡನೆ ಸಹೋದರ ಭಾವದಿಂದಿರುವುದು–ಪರಸ್ಪರ ಪ್ರೀತಿಯಿಂದ ಕಂಡು, ಕಷ್ಟಕಾಲಗಳಲ್ಲಿ ಉಳಿಸಲೆತ್ನಿಸುವುದು. ಪರ್ವತಗಳಲ್ಲಿ ಸೇವಕರು, ಒಡೆಯರೆಂಬ ವ್ಯತ್ಯಾಸವಿಲ್ಲ. ಎಲ್ಲರೂ ವಿಶ್ವಸನೀಯ ಗೆಳೆಯರು, ಮತ್ತೊಬ್ಬರಿಗಾಗಿ ಪ್ರಾಣವನ್ನಾದರೂ ಕೊಡಲು ಸಿದ್ಧರಾದವರು. ಮಿ| ಸ್ಮಿತ್‌ರವರು "ಮೈತ್ರಿ" ಎಂಬ ಅಧ್ಯಾಯದಲ್ಲಿ ಡಾರ್ಜಿಲಿಂಗಿನ ನೀಮಾ ತಂದ್ರೂಪನೆಂಬವನ ಕುರಿತು ಬರೆದಿದ್ದಾರೆ. ಈ ಭಾರತೀಯನು ಹಲವು ಪರ್ವತಾರೋಹಿಗಳ ಪ್ರಾಣವುಳಿಸಿದ್ದಾನೆ. ಇದೇ ಮಹನೀಯನು ನಾಲ್ಕು ಬಾರಿ ನಂಗ ಪರ್ವತವೇರಲೆತ್ನಿಸಿದ್ದಾನೆ. ಕಾಂಚೆನ್‌ಜಂಗಾ ಪರ್ವತವೇರಲು ಎರಡು ಬಾರಿ ಹೋಗಿದ್ದಾನೆ ಇವನೊಬ್ಬ ರಿಕ್ಷಾವಾಲ. ಹರಿದ ಅಂಗಿಯ ಮೇಲೆ ಬೆವರಿನಿಂದ ತೊಯಿದ ಒಂದು ಬಟ್ಟೆಯ ಚೂರಿಗೆ ಸಿಕ್ಕಿಸಿದ ಸ್ವರ್ಣ ಪದಕವೊಂದನ್ನು ಅವನೆದೆಯ ಮೇಲೆ ಕಾಣಬಹುದು. ಆ ಪದಕದಡಿಯಲ್ಲಿ ಧೀರ ಸ್ವಭಾವ, ವಿಶ್ವಸನೀಯ, ಸಹೋದರ ಭಾವದ ಹೃದಯವೊಂದಿದೆ. ಪರ್ವತಾರೋಹಣದ ಕಾಲದಲ್ಲಿ ಇವನು ಸ್ಮಿತ್ ರವರಿಗೆ ತುಂಬಾ ಉಪಕಾರಮಾಡಿ ಅವರನ್ನುಳಿಸಿದ್ದಾನೆಂದು ಅವರ ಬರೆದಿದ್ದಾರೆ.

ಅವರು ನೀಮಾ ತಂದ್ರೂಪನ ಕುರಿತು ಬರೆದುದನ್ನು ನೋಡುವಾಗ ಪರ್ವತಾರೋಹಿಗಳು ತಮ್ಮ ಜೀವನದ ತತ್ವದಲ್ಲಿ ತುಂಬಾ ವಿಶ್ವಾಸವುಳ್ಳವರೆಂಬುದು ಸ್ಪಷ್ಟವಾಗುತ್ತದೆ. ಇದನ್ನು ನೆನಸುವಾಗ ಬ್ರೌನಿಂಗ್ ಕವಿಯು ಎಲ್ಲಿಯೋ ಹೇಳಿದೊಂದು ವಾಕ್ಯದ ನೆನಪಾಗುತ್ತದೆ. ಅವರನ್ನುತ್ತಾರೆ: "ಯಾವಾಗಲೂ ಭೂಮಿಯ ಮೇಲೆಯೇ ಇರುವುದಕ್ಕಿಂತ ಒಮ್ಮೆಯಾದರೂ ಮೋಡಗಳ ಮೇಲೇರಿ ಬೀಳುವುದು ಲೇಸು" ಮಿ| ಸ್ಮಿತ್‌ರವರು ಪ್ರಾಯಶಃ ಬ್ರೌನಿಂಗ್ ಕವಿಯ ಮಾತನ್ನು ಅಕ್ಷರಶಃ ನಂಬುವವರಾಗಿರಬೇಕು. ಮೊನ್ನೆ ಹಿಮಾಲಯವನ್ನೇರಿ ತುತ್ತತುದಿಗೆ ಹೋಗಲು ಸಾಧ್ಯವಾಗದೆ ಹಿಂತಿರುಗಿ ಬಂದವರಲ್ಲೊಬ್ಬರಾದ ಮಿ| ಸ್ಮಿತ್‌ರವರು ಧೀರಸ್ವಭಾವದವರು. ಪ್ರಕೃತಿಯನ್ನು ಜಯಿಸಬೇಕೆಂಬುದು ಅವರ ಧ್ಯೇಯವಲ್ಲ. ಚಂದ್ರಲೋಕಕ್ಕೆ ಹೋದರೆ ಒಬ್ಬ ಮನುಷ್ಯನಿಗೆ ಯಾವ ಆನಂದವಾಗಬಹುದೋ ಅದೇ ಆನಂದವನ್ನು ಪಡೆಯುವುದರಲ್ಲಿ ಪರ್ವತಾರೋಹಿಗಳಿಗೆ ಸಮಾಧಾನವಾಗುತ್ತದೆ.

ಭಾರತೀಯ ಹಿಮಾಲಯ ಪರ್ವತಾರೋಹಿಗಳು ಯುರೋಪ್ ಮತ್ತು ಅಮೇರಿಕಗಳಲ್ಲಿರುವ ಅಲ್ಪಾಯ್ನ್‌ಕ್ಲಬ್ ಗಳಂತೆ ತಮ್ಮದೊಂದು ಕ್ಲಬ್ಬನ್ನು ಮಾಡಿ ಅದಕ್ಕೆ ಹಣ ಕಳುಹಿಸುತ್ತಾರೆ. ಪ್ರೊ ಅಬ್ದುಲ್ ಹಮೀದ್ ಬೇಗ್ ಎಂಬ ಚತುರ ಯುವಕರು ಈ ತಿಂಗಳಲ್ಲಿ ಕಾಂಗ್ರಾ ಗುಡ್ಡಗಳಿಗೆ ಹೋಗಿ ಕೆಲವರಿಗೆ ಪರ್ವತಾರೋಹಣದ ಅಭ್ಯಾಸವನ್ನು ಕೊಡುತ್ತಿದ್ದಾರೆ. ಶ್ರೀ ಜೋಶಿಯೆಂಬವರು ಮಧ್ಯಹಿಮಾಲಯಗಳಲ್ಲಿರುವ ೨೨,೦೦೦ ಅಡಿ ಎತ್ತರದ "ಪಂಚೂಲಿ" ಎಂಬ ಪರ್ವತಾರೋಹಣ ಮಾಡಲು ಇತ್ತೀಚೆಗೆ ಅಲ್ಮೋರಕ್ಕೆ ತೆರಳಿದ್ದಾರೆ. ಈ ಕ್ಲಬ್ಬಿಗೆ ಪ್ರಾಂತಿಕ ಸರಕಾರಗಳು ಧನ ಸಹಾಯಮಾಡಬೇಕೆಂದು ಬಿನ್ನವಿಸಿಕೊಂಡಿದ್ದಾರೆ. ಈಗಾಗಲೇ ಅವರು ಹಲವು ಕಡೆಗಳಿಂದ ಧನ ಸಹಾಯವನ್ನು ಪಡೆದಿದ್ದಾರೆ.

೧೯೫೮ ರಲ್ಲಿ ಹಿಮಾಲಯಗಳ ಮೇಲಿರುವ ಶಕ್ತಿಗಳು ಯಾರಿಗೊಲಿಯುವುದೆಂಬುದನ್ನು ನೋಡಬೇಕಾಗಿದೆ.

———

# ಕವಿಗಳಾಗಬೇಕಾದರೆ ಏನು ಮಾಡಬೇಕು?


ಬರೆದವರು:

ಶ್ರೀಮಾನ್ "ಮುರಲೀಧರ" ರಾಯರು,
ಉಭಯ ಭಾಷಾ ಕವಿ.
(ತುಳು ಮತ್ತು ಕನ್ನಡ.)


**ಕಾವ್ಯರಚನೆಯೆಂದರೆ ಜಗತ್ತಿನ ಆದಿಯಿಂದಲೇ ಗೌರವಿಸಲ್ಪಟ್ಟ ಒಂದು ಕಲೆ. ಮೊದಲಿನವರು "ಕವಿಗಳು ಹುಟ್ಟುವುದಲ್ಲದೆ ಮಾಡುವುದಲ್ಲ" ವೆಂದು ಹೇಳುವುದಿದ್ದರೂ ನನ್ನಭಿಮತಕ್ಕನುಸಾರವಾಗಿ ಇದು ನಿರಾಧಾರವಾಗಿದೆ. ಇದರಷ್ಟು ಸುಲಭವಾದುದು ಇನ್ನೊಂದಿಲ್ಲ. ಒಮ್ಮೆ ಒಂದು ಪದ್ಯವನ್ನು ಬರೆದುಬಿಟ್ಟರೆ ಸಾಕು. ಮತ್ತೆ ಮುದ್ರಿಸಲಾಗದ ಶಬ್ದಗಳನ್ನೊಳಗೊಂಡ ಪದ್ಯವನ್ನೂ ಬರೆಯಲು ಸಾಧ್ಯವಾಗಿದೆ. ನಮ್ಮ ಕರ್ನಾಟಕದಲ್ಲಿ ಇತ್ತೀಚೆಗೆ ಕಾವ್ಯರಚನೆಗಾಗಿ ಚಡಪಡಿಸುವವರು ನನ್ನೀ ಮಹತ್ವದ ಲೇಖನವನ್ನೋದಿದರೆ ಕವಿತೆಗಳನ್ನು ಬರೆಯುವ ರಹಸ್ಯವನ್ನು ಸುಲಭವಾಗಿ ತಿಳಿಯಬಹುದು.**




ಸ್ಫೂರ್ತಿ ಬಂದೊಡನೆಯೇ ಬರೆಯಲು ತಯಾರಾಗಬೇಕು. ಪೆನ್ಸಿಲನ್ನು ಹುಡುಕುತ್ತಾ ಕುಳಿತರೆ ಸ್ಫೂರ್ತಿಯು ಹಾರಿಹೋಗಬಹುದು!

●

ಕವಿಗಳಾಗಬೇಕಾದವರು ಮೊದಲು ಮಾಡಬೇಕಾದ ಕೆಲಸವೆಂದರೆ ಬೆಳ್ಳಗಿನ ಒಂದು ತಾವು ಕಾಗದ ಮತ್ತೊಂದು ಸಣ್ಣ ಪೆನ್ಸಿಲನ್ನು ಸಂಗ್ರಹಿಸುವುದು. ಸಂಗ್ರಹಿಸುವುದೆಂದೊಡನೆ ಆಶ್ಚರ್ಯಪಡಬಾರದು. ಕವಿಜನರು ಹೆಚ್ಚಾಗಿ ದರಿದ್ರರು. ಅದು ಸ್ವಾಭಾವಿಕವಾದುದೇ ಸರಿ. ಲಕ್ಷ್ಮಿಗೂ ಸರಸ್ವತಿಗೂ ಯಾವಾಗಲೂ ಸರಿಬೀಳುವಂತಿಲ್ಲ. ಮೊದಲಿಗರಾದುದರಿಂದ ಲಕ್ಷ್ಮಿ-ಸರಸ್ವತಿಯೆಂದೊಡನೆ ನಿಮ್ಮ ನೆರೆಹೊರೆಯವರೋ ಎಂದು ಯೋಚಿಸತೊಡಗಬಾರದು. ವಿದ್ಯೆ ಮತ್ತು ಸಿರಿಗೆ ಕವಿತಾಭಾಷೆಯಲ್ಲಿ ಹೀಗನ್ನುತ್ತಾರೆ. ಆದುದರಿಂದ ನಿಮ್ಮ ಮುಂದಿರುವ ಏಕಮಾತ್ರ ಉಪಾಯವೆಂದರೆ ಸಮೀಪದ ಪುಸ್ತಕದ ವ್ಯಾಪಾರಿಯಲ್ಲಿಗೆ ಹೋಗಿ—"ಜಗನ್ನಾಥ ವಿಜಯವಿದೆಯೇ?" ಎಂದು ಪ್ರಶ್ನಿಸಬೇಕು. "ಇಲ್ಲ ಸ್ವಾಮಿ." "ರಾಮಾಶ್ವಮೇಧ" ವಿದೆ ಯೆಂದವನು ಉತ್ತರ ಕೊಡಬಹುದು. ಕೂಡಲೆ ಘನ ಪಂಡಿತರಂತೆ "ಸರಿ, ನನಗೆ ಕೆಲವು ಕಾವ್ಯಗಳು ಬೇಕಾಗಿವೆ. ಪಟ್ಟಿ ಮಾಡಬೇಕಾಗಿದೆ. ಕಾಗದ ಪೆನ್ಸಿಲು ಕೊಡಿ" ಎನ್ನಬೇಕು. ಒಳ್ಳೆ ಲಾಭ ಸಿಗಬಹುದೆಂದು ಭಾವಿಸಿ ಮಹಾಶಯ ಕಾಗದ ಪೆನ್ಸಿಲು ಕೊಡುತ್ತಾನೆ. ವ್ಯಾಪಾರಿಯು ಇತರರೊಡನೆ ಮಾತಾಡುವ ವೇಳೆಯಲ್ಲಿ ಪುಸ್ತಕದ ಹೆಸರುಗಳನ್ನು ಬರೆದ ಅಂಶವನ್ನು ಹರಿದು ಅವನಿಗೆ ಕೊಟ್ಟು—"ಈಗ ಬಂದೆ" ಯೆಂದು ಪೆನ್ಸಿಲು ಮತ್ತು ಉಳಿದ

ಕಾಗದವನ್ನು ಕಿಸೆಯೊಳಗೆ ಹಾಕಿ ನೆಟ್ಟಗೆ ನಡೆಯಬೇಕು. ಅಥವಾ ನೀವು ತಪ್ಪಿ ದೊಡ್ಡ ಮನುಷ್ಯರಾಗಿದ್ದಲ್ಲಿ ಡೈರೆಕ್ಟರರ ಸಭೆಗೆ ಹೋದಾಗ ಅಲ್ಲಿಯ ಪೆನ್ಸಿಲನ್ನೂ ತರಬಹುದು. ಹೇಗಿದ್ದರೂ ಇದಕ್ಕೆ ದುಡ್ಡು ಕೊಡಬಾರದು. ಕವಿ ಧರ್ಮಕ್ಕೆ ವಿರೋಧವಾದ ಮೊದಲನೆ ಸಂಗತಿಯೆಂದರೆ ಪೆನ್ಸಿಲಿಗೆ ಹಣಕೊಡುವುದು. ನೀವು ನಿಜವಾದ ಕವಿಗಳಾಗಬೇಕಾದರೆ ಎಂದಿಗೂ ಕಾಗದ ಪೆನ್ಸಿಲಿಗೆ ಹಣ ಕೊಡಬೇಡಿರಿ.

**ಸ್ಫೂರ್ತಿ.**

ಕಾಗದ ಪೆನ್ಸಿಲು ದೊರೆತ ಬಳಿಕ ಬಾಲಕವಿಯು ಯೋಚಿಸಬೇಕಾದ ವಿಚಾರವೆಂದರೆ ಸ್ಫೂರ್ತಿ. ಜಗತ್ತಿನ ಎಲ್ಲಾ ಶಕ್ತಿಗಳಿಗಿಂತ ಇದೊಂದು ವಿಚಿತ್ರ ಶಕ್ತಿ. ಬೇಕಾದಾಗ ಬರುವುದಿಲ್ಲ. ಬೇಡವಾದಾಗ ಬಂದೇ ಬಿಡುತ್ತದೆ. ಬಹುಕಾಲದ ಬಳಿಕ ಬಂದ ಸ್ಫೂರ್ತಿಯಿಂದಾಗಿ ಬರೆದ ಕವನದ ಮಾದರಿಯೊಂದನ್ನು ಕೆಳಗೆ ಬರೆಯುತ್ತೇನೆ:

"ಓ ಎನ್ನ ಮನದನ್ನೆ,
ಬಾಗಿಲನು ತೆರೆ ರನ್ನೆ
ಮಾಡಿದರೆ ಕಣ್ಸನ್ನೆ
ಕಾಣದೇತಕೆ, ಚೆನ್ನೆ?

. . . .

ನಿನ್ನೆದೆಯ ಎನ್ನೆದೆಯು
ಸೇರ ಬಯಸುತಲಿಹುದು
ಮನದೊಳಿಹ ಬೇಗುದಿಯು
ಕುದಿದುಕ್ಕುತಿಹುದು!

. . . . .

ಬಾರೊಮ್ಮೆ ನಗುಮುಖವ
ತೋರಿಕೊಡು ಅತಿಸುಖವ!"

ಚರಣಗಳಿದ್ದರೂ ನಮ್ಮೂರ ಮಿತ್ರಮಂಡಲಿಯವರು ಇದನ್ನು ಬರೆದುದಕ್ಕಾಗಿ ನನ್ನನ್ನು ಬಹಳ ಯೋಗ್ಯವಾಗಿ ಸನ್ಮಾನಿಸಿಬಿಟ್ಟಿದ್ದಾರೆ. ಇದು ನನ್ನ ಪ್ರಖ್ಯಾತ ಕವನ ಸಂಗ್ರಹವಾದ 'ಕವಿತೋದ್ಯಾನ'ದ ಒಂದು ಚಿಕ್ಕ ಕವಿತೆ.

ಇದರ ಭಾವನೆಗಳು ಎಷ್ಟು ಗಂಭೀರವಾಗಿವೆ? ಷಡಕ್ಷರಿಯೇ ಮೊದಲಾದ ಕವಿಗಳ ಕವನಕ್ಕೆ ನಾನಾರ್ಥಗಳಿರುವಂತೆ ಇದು ಕೂಡಾ ಹಲವು ಅರ್ಥಗಳುಳ್ಳುದಾಗಿದೆ. ಮೊದಲು ಒಬ್ಬ ಪ್ರೇಮಿಕೆಯ ಕುರಿತು ಬರೆದುದೆಂದು ಕಂಡರೂ ಇದು ಸರಸ್ವತಿಯ ಕುರಿತು ಬರೆದ ಪದ. ಮನದನ್ನೆಯೆಂದೊಡನೆಯೇ ಆಕೆಯು ಮಡದಿಯಾಗಬೇಕೆಂದಿಲ್ಲ ಆ ರೀತಿ ಅರ್ಥ ಮಾಡಿದರೂ ಹಾನಿಯಿಲ್ಲ. ಕಾರಣ—ಪುರಾಣಗಳಲ್ಲಿ ಸರಸ್ವತಿಯು ಬ್ರಹ್ಮನ ಮಗಳು, ಮತ್ತು ಮಡದಿಯೆನ್ನಲಿಲ್ಲವೇ? ಅರಿಯದವರು ಮಗಳಾದವಳು ಮಡದಿಯಾಗುವುದು ಹೇಗೆಂದು ಕೇಳಬಹುದು. ಸರಿ. ಅಲ್ಲಿದೆ ರಹಸ್ಯ. ಬ್ರಹ್ಮನೆಂದರೇನು? ಜ್ಞಾನ. ಜ್ಞಾನವಿದ್ದರಲ್ಲವೆ ವಿದ್ಯೆ. ಆ ಬ್ರಹ್ಮಜ್ಞಾನದಿಂದ ಹುಟ್ಟಿದ ವಿದ್ಯೆಯೇ ಸರಸ್ವತಿ. ಆದುದರಿಂದ ಬ್ರಹ್ಮನಿಗೆ (ಅಂದರೆ ಜ್ಞಾನಕ್ಕೆ) ಹುಟ್ಟಿದವಳು ವಿದ್ಯೆ ಅಂದರೆ ಸರಸ್ವತಿ. ವಿದ್ಯೆಗೂ ಜ್ಞಾನಕ್ಕೂ ಬಹಳ ಅನ್ಯೋನ್ಯತೆ. ಗಂಡನಿಗೂ ಹೆಂಡತಿಗೂ ಇರುವ ಅನ್ಯೋನ್ಯತೆಯು ಲೋಗರಿಗೆ ತಿಳಿದಿರುವುದರಿಂದ ಬ್ರಹ್ಮನ ಮಡದಿ ಸರಸ್ವತಿಯೆಂದು ಹೇಳಲಾಯಿತು. ಇನ್ನು-ಮೇಲಿನ ಕವನದ ಕುರಿತು ಪ್ರತ್ಯೇಕವೇನೂ ಹೇಳಬೇಕಾಗಿಲ್ಲ. ನನ್ನ ಪ್ರಸಿದ್ಧ ಗೆಳೆಯರಾದ ತಿರು ವೆಂಕಟೇಶಯ್ಯ, ಎಮ್. ಎ. ಅವರು ಮುನ್ನುಡಿಯಲ್ಲಿ ಶಬ್ದಸಂಪತ್ತು, ಪ್ರಾಸವೈಭವ, ಕವಿತಾಚಾತುರ್ಯ, ಮಾಧುರ್ಯ, ಧ್ವನಿ, ಮೊದಲಾದುವುಗಳ ಕುರಿತು ಸಾಕಷ್ಟು ಹೇಳಿದ್ದಾರೆ. (ಸ್ವಾರ್ಥಿಗಳು ನಮ್ಮನ್ನು ಪರಸ್ಪರ ಪ್ರಶಂಸಾ ಸಂಘದವರೆನ್ನುವುದಿದ್ದರೂ ಕನ್ನಡಮ್ಮನ ಸೇವೆಯೇ ನಮ್ಮ ಧ್ಯೇಯ!)

ಸರಿ ಕಾವ್ಯದಲ್ಲಿ ಮಾಧುರ್ಯವಿರಬೇಕು. ಅದು ಕಾವೇರಿಯಂತೆ ಹರಿಯಬೇಕು. ಸಾಮಾನ್ಯವಾಗಿ ಸ್ಫೂರ್ತಿಬರಬೇಕಾದರೆ ಪ್ರೇಮವೇ ಯೋಗ್ಯವಾದ ವಿಷಯವಾಗಿದೆ. ಹೆಚ್ಚಿನ ಕವಿಗಳು ನಿಜವಾಗಿ ಯಾರನ್ನೂ ಪ್ರೇಮಿಸದೆ ಭಾವನೆಯ ಚಿತ್ರಗಳನ್ನು ಬರೆಯುವುದುಂಟು. ಇದು ಕವಿಯ ಸಲ್ಲಕ್ಷಣವಲ್ಲ. ಪ್ರಕೃತಿಯಲ್ಲಿ ಬೆರೆಯಬೇಕು. ಹಿರಿಯರು ಹೇಳಿದ ಮಾತುಗಳಿವು. ಏನು ಸ್ತ್ರೀಯು ಪ್ರಕೃತಿಯಲ್ಲಿ ಸೇರಲಿಲ್ಲವೆ? ನಮ್ಮ ಪ್ರಾಚೀನ ಕವಿಗಳ ಕೃತಿಗಳನ್ನು ನೋಡಿದರೆ ಅವರು ಪ್ರೇಮ (ಇದರ ಅರ್ಥವು ಹೆಚ್ಚಾಗಿ ಮೋಹವೆಂದೇ ತಿಳಿದುಕೊಳ್ಳಬೇಕು) ದ ಎಲ್ಲಾ ವಿಚಾರಗಳನ್ನು ಕೂಲಂಕಷವಾಗಿ ತಮ್ಮ ಕವನಗಳಲ್ಲಿ ವರ್ಣಿಸಿದ್ದಾರೆ. ಹಾಗಿರುವಾಗ ಈಗಲೂ ಕವಿಗಳು ಬೇಕಾದಂತೆ ಸ್ತ್ರೀಯರನ್ನು ವರ್ಣಿಸಬಹುದು. (ಕವಯಿತ್ರಿಯರು ಪುರುಷರನ್ನು ಕುರಿತು ವರ್ಣಿಸುವುದರಲ್ಲಿ ಯಾವ ತೊಡಕೂ ಇಲ್ಲ.) ಆದುದರಿಂದ ಕವಿಗಳಾಗುವವರು ನಿಜವಾಗಿಯೂ ಯಾರನ್ನಾದರೂ ಪ್ರೀತಿಸಬೇಕು. ಎಷ್ಟರತನಕ ಪ್ರೀತಿಸಬೇಕೆಂಬುದು ಕವಿ ಸ್ವಾತಂತ್ರ್ಯಕ್ಕೆ ಸೇರಿದ ವಿಷಯ. ಈ ಕರ್ಮಯುಗದಲ್ಲಿ ಕಾರ್ಯ

ದಲ್ಲಿಯೇ ಪ್ರತಿಯೊಂದನ್ನು ಮಾಡುವುದುತ್ತಮವೆಂದು ಅನುಭವಿಯಾದ ನನ್ನಭಿಮತ. ಕಾರ್ಯರೂಪದಲ್ಲಿ ನೀವು ವಿಶ್ವಾಸವಿಟ್ಟರೆ ಸ್ಫೂರ್ತಿಯು ಮಳೆಗಾಲದಲ್ಲಿ ಮಳೆ ಬಂದಂತೆಯೇ ಬರುವುದು ನಿಶ್ಚಯ.

ಇನ್ನುಳಿದುದು ಪ್ರಕಟನೆಯ ವಿಚಾರ. ಕರ್ನಾಟಕದಲ್ಲಿ ಪತ್ರಿಕೆಗಳು ದಿನಕ್ಕೆ ಹತ್ತಿಪ್ಪರಂತೆ ಆಳಿಂಬೆಗಳೋಪಾದಿಯಲ್ಲ ಹುಟ್ಟುತ್ತಿವೆ, ಸಾಯುತ್ತಿವೆ. ಇದು ಪ್ರಕೃತಿ ನಿಯಮವೆನ್ನಿ. ಹುಟ್ಟಿದ್ದಕ್ಕೆ ಸಾವು ಇದ್ದೇ ಇದೆ. ಪತ್ರಿಕೆಗಳೆಂದೇನು? ಕವನಗಳ ಅವಸ್ಥೆಯೂ ಅದೇ. ಪತ್ರಿಕಾಸಂಪಾದಕರನ್ನು ಕಂಡು ಮಾತಾಡಿ, ನಿಮಗೆ ಇಷ್ಟು ಚಂದಾದಾರರನ್ನು ಮಾಡಿಕೊಡುತ್ತೇನೆ, ಇಷ್ಟು ಜಾಹಿರಾತು ತೆಗೆದುಕೊಡುತ್ತೇನೆಂದರೆ ಹೇಗಾದರೂ ಪ್ರಕಟಿಸುತ್ತಾರೆ. ಇಲ್ಲದಿದ್ದರೆ ಹಿಂದೆ ಕಳುಹಿಸಲು ಕಳುಹಿಸಿದ ಅಂಚೆಚೀಟಿಯೂ ಇಲ್ಲ, ಕವನವೂ ಇಲ್ಲ. (ಅಂತರಂಗದ ಸಂಪಾದಕರಿಗೆ 'ಬೇರಿಂಗ್'ಮಾಡಿ ಲೇಖನ ಕಳುಹಿಸಿ ಅದು ಹಿಂದೆ ಬಂದು ನಾನು ಎರಡು ಪಾಲಷ್ಟು ಹಣ ಕೊಡಬೇಕಾಯಿತು.) ಒಟ್ಟಿನ ಮೇಲೆ ಸಂಪಾದಕರನ್ನು ಮೆಚ್ಚಿಸಬೇಕು. ಮೆಚ್ಚಿಸಲು ಒಂದು ಸುಲಭೋಪಾಯವಿದೆ. ನಿಮ್ಮಪದ್ಯಗಳನ್ನು ಯಾರೂ ಪ್ರಕಟಿಸದೆ ನೀವು ನಿರಾಶರಾದರೆ ನಿಮ್ಮ ನಿಜವಾದ ಹೆಸರನ್ನು ಬರೆಯದೆ "ಕುಮಾರಿ ಸುನಾಲಿನಿ" ಅಥವಾ ಇನ್ನಾವುದಾದರೂ ಒಂದು ಕುಮಾರಿಯ ಹೆಸರನ್ನಿಟ್ಟು ಪತ್ರವ್ಯವಹಾರ ನಡೆಸಬೇಕು. ಚೀಟಿಯಿಲ್ಲದಿದ್ದರೂ ಸಂಪಾದಕರು ಒಂದರ ಮೇಲೊಂದು ಪತ್ರ ಬರೆಯುತ್ತಾರೆ. ಮಧ್ಯೆ ಮಧ್ಯೆ ನೀವು ಸಂಪಾದಕರ ಚಾತುರ್ಯವನ್ನು ಹೊಗಳಬೇಕು. ಹಾಗಾದರೆ ನೀವು ಪ್ರಸಿದ್ಧ "ಲೇಖಿಕೆ"ಯರಾಗುತ್ತೀರಿ. ಕೊನೆಗೆ ನಿಮ್ಮಂತರಂಗವನ್ನು ಹೇಳಿದರೆ ...ಏನಾಗುವುದೆಂದು ನೀವೇ ಯೋಚಿಸಿರಿ. ಯತ್ನವಿಲ್ಲದೆ ಯಾವುದೂ ನಡೆಯುವಂತಿಲ್ಲ ಅಂದಿದ್ದಾನಲ್ಲಾ ಈರೇಳು ಲೋಕಗಳ ಕವಿಯಾದ ಶ್ರೀ ಕೃಷ್ಣ ಪರಮಾತ್ಮಾ–"ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ" ನಿಮ್ಮ ಭಾಗ್ಯವಶಾತ್ ದೊಡ್ಡ ಮನುಷ್ಯರು ನಿಮ್ಮ ಕವನ ಸಂಗ್ರಹಕ್ಕೊಂದು ಮುನ್ನುಡಿಯನ್ನು ಬರೆದರಾಯಿತಲ್ಲಾ. ಅದು ಹೇಗೂ ಇರಲಿ. ಆಧುನಿಕ ಜಗತ್ತಿನಲ್ಲಿ "ಕೋವಿ"ಗಳಿಗಿದ್ದಷ್ಟೇ ಪ್ರಾಮುಖ್ಯತೆಯು ಕವಿಗಳಿಗೂ ಇದೆಯೆಂಬುದನ್ನು ಮರೆಯಬಾರದು.

---

# ವಚನಾಮೃತ

"ಅಹಿಂಸೆಯು ಅಶಕ್ತರ ಒಂದೇ ಒಂದು ಆಯುಧ"

"ನಂಬದಿರು ಈ ದೇವ ನಿತ್ಯನಲ್ಲ. ನಾಳೆ ಹೊಸ ದೇವನಿಗೆ ಪಟ್ಟವಾಗಲು ಬಹುದು'

"ನಾನೇ ನೀನು; ನೀನೇ ನಾನು; ಆದುದರಿಂದ ನಿನ್ನ ಹಣವನ್ನೆಲ್ಲಾ ನನಗೆ ಕೊಡು, ನನ್ನ ಸಾಲವನ್ನೆಲ್ಲಾ ನೀನೇ ತೆಗೆದುಕೋ"

"ಸತ್ಯವಂತರ ಕೂಡೆ ಸುಳ್ಳನ್ನೇ ಹೇಳು. ಅವನು ಮಾತ್ರ ಅದನ್ನು ನಂಬುತ್ತಾನೆ"

"ಆತ್ಮತ್ಯಾಗವೇ ಮಸಣದ ಮಾರ್ಗ"

"ಪರಾವಲಂಬನೆಯಿಲ್ಲದ ಸ್ವಾತಂತ್ರ್ಯಾನುಭವವು ಹುಚ್ಚರ ಕನಸು"

"ಶ್ರಾದ್ದ'ಯೇ ಸುಖಜೀವನಕ್ಕೆ ಸಮೀಪದ ಹಾದಿ"

"ಆವ ಬಲವಿದ್ದರೇನು, ದೈವ ಬಲವಿಲ್ಲದವಗೆ"

# ಅಂತರಂಗದ ಸುದ್ದಿಗಳು

**ಅಂತರಂಗದ ವಿಶೇಷ ಪ್ರತಿನಿಧಿಯು ಗುಟ್ಟಿನ ಡೈರಿಯ ಆಧಾರರಹಿತವಾದ ಸುದ್ದಿಗಳು.**
**ಓದಿ ಸರ್ವಥಾ ಗಡಿಬಿಡಿ ಮಾಡಬಾರದು.**

●

### ಕರ್ನಾಟಕಕ್ಕೆ ಜಿನ್ನರು?

ಮುಸ್ಲಿಮ್‌ಲೀಗಿನ ಅಧ್ಯಕ್ಷರಾದ ಮಿ| ಎಮ್. ಎ. ಜಿನ್ನರು ಸದ್ಯದಲ್ಲಿಯೇ ಕರ್ನಾಟಕಕ್ಕೆ ಬಂದು ಲೀಗ್ ಪ್ರಚಾರವನ್ನು ಮಾಡುವರೆಂದು ವಿಶ್ವಸನೀಯವಾಗಿ ತಿಳಿದುಬಂದಿದೆಯಂತೆ.

o o o

### ಅಜ್ಜರಕಾಡಿನಲ್ಲಿ ರೇಡಿಯೊ?

ಉಡುಪಿ ಮುನಿಸಿಪಾಲಿಟಿಯವರು ಅಜ್ಜರಕಾಡಿನ ಬಳಿಯಲ್ಲಿ ಸಾರ್ವಜನಿಕರ ಉಪಯೋಗಕ್ಕಾಗಿ ರೇಡಿಯೋ ಇಡುವ ವ್ಯವಸ್ಥೆ ಮಾಡಲು ಯೋಚಿಸುತ್ತಿರುವರೆಂದು ವದಂತಿ.

o o o

### ಮೈಸೂರಲ್ಲಿ ಪ್ರಾಯಸ್ಥರಿಗೆ ಮತದಾನ ಹಕ್ಕು!

ಮೈಸೂರು ಸಂಸ್ಥಾನದ ಪ್ರಾಯಸ್ಥರಿಗೆಲ್ಲಾ ಮತದಾನ ಹಕ್ಕು ಸದ್ಯದಲ್ಲಿಯೇ ಕೊಡಲ್ಪಡುವುದೆಂದು ಸುದ್ದಿ ಹರಡಿದೆ.

o o o

### ಖರೆಯವರ ಭಾಷಣ

ಡಾ| ಯನ್. ಬಿ. ಖರೆಯವರು "ಕಾಂಗ್ರೆಸ್ ಶಿಸ್ತು ಪಾಲನೆ" ಎಂಬ ವಿಷಯ ರೇಡಿಯೋ ಭಾಷಣ ಮಾಡುವರೆಂದು ಕಿಂವದಂತಿ.

o o o

### ಯಂ. ಯನ್. ರೋಯ್‌ರವರಿಗೆ ಅಧ್ಯಕ್ಷತೆ.

ಭಾಯಿ ಎಂ. ಎನ್. ರೋಯ್‌ರವರನ್ನು ಬಂಗಾಳ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರನ್ನಾಗಿ ಮಾಡಲಿರುವರೆಂದು ವಾರ್ತೆ ಬಂದಿದೆಯಂತೆ.

### ಕನ್ನಡ ಟೈಪ್ ರೈಟರ್

ಬಾಳೆಹೊನ್ನೂರಿನಲ್ಲಿ ಕನ್ನಡಿಗರೊಬ್ಬರು ಕನ್ನಡ ಟೈಪ್ ರೈಟರನ್ನು ತಯಾರಿಸಿದ್ದಾರಂತೆ. ಇದರ ಕಾಪಿರೈಟನ್ನು ೧ಲಕ್ಷ ರೂಪಾಯಿಗಳಿಗೆ ಮಾರಲು ಅವರು ಒಪ್ಪುವರೆಂದು ಸುದ್ದಿ.

o o o

### ಮಂಗಳೂರಲ್ಲಿ ಫಿಲ್ಮ್ ಕಂಪೆನಿ.

ಮಂಗಳೂರಲ್ಲಿ "ದಿ ಕೆನರಾ ಟಾಕೀಸ್" ಎಂಬ ಚಲಚ್ಚಿತ್ರ ಸಂಸ್ಥೆಯನ್ನು ಸ್ಥಾಪಿಸುವರೆಂದೂ, ಕದ್ರಿಯಲ್ಲಿ ಸ್ಟುಡಿಯೋ ಕೆಲಸವು ನಡೆಯುತ್ತದೆಂದೂ, "ಲಂಡನ್ ಟೈಮ್ಸ್" ಪತ್ರಿಕೆಯ ಸುದ್ದಿಗಾರರು ಬರೆದಿದ್ದಾರೆ.

o o o

### ಲೀಗ್ ಮಹಾಸಭೆ ಐಕ್ಯ!

ಮುಸ್ಲಿಮ್ ಲೀಗಿನವರೂ ಹಿಂದೂ ಮಹಾ ಸಭೆಯವರೂ ಒಂದಾಗುವ ಕುರಿತು ಮಿ| ಜಿನ್ನರಿಗೂ ಶ್ರೀ. ಸಾವರ್ಕರರಿಗೂ ಪತ್ರವ್ಯವಹಾರ ನಡೆಯುತ್ತಿದೆಯಂತೆ. ಮುಸಲ್ಮಾನರು ಮಾಂಸ ತಿನ್ನಬಾರದು, ಹಿಂದುಗಳು ಮೂರ್ತಿಪೂಜೆ ಮಾಡಬಾರದು—ಎಂಬೆರಡು ತೀರ್ಮಾನಗಳು ಮಾತ್ರ ಬಾಕಿಯುಳಿದಿದೆಯಂತೆ. ಈ ಕುರಿತು ಸದ್ಯದಲ್ಲೇ ಮುಂಬಯಿಯಲ್ಲಿ ನಡೆಯಲಿರುವ ಸಭೆಯ ಅಧ್ಯಕ್ಷತೆಯನ್ನು ಲಾರ್ಡ್ ವಿಲ್ಲಿಂಗ್ಡನರು ವಹಿಸುವರೆಂದು "ದಿ ಯುಟೋಪಿಯಾ ಎಕ್ಸ್‌ಪ್ರೆಸ್" ಪ್ರಕಟಿಸಿದೆ.

o o o

### ಹೊಸಸೂಚನೆ

ಎಲ್ಲಾ ಶಾಲೆಗಳನ್ನು ಚಲಚ್ಚಿತ್ರಶಾಲೆಗಳನ್ನಾಗಿ ಮಾರ್ಪಡಿಸಿ, ಪುಸ್ತಕಗಳಿಂದ ಕಲಿಸುವ ಬದಲು ಚಲಚ್ಚಿತ್ರಗಳನ್ನೆ ತೋರಿಸಿ ಶಿಕ್ಷಣವೀಯಬೇಕೆಂಬ ಮಸೂದೆಯನ್ನು ಮದ್ರಾಸ್ ಎಸೆಂಬ್ಲಿಯಲ್ಲಿ ಒಬ್ಬ ಸದಸ್ಯರು ತರಲಿರುವರಂತೆ. ಈ ಸುದ್ದಿಯನ್ನು ಕೇಳಿ ಅಧ್ಯಾಪಕ ಸಂಘದವರು ತಮ್ಮ ಬಲವಾದ ವಿರೋಧವನ್ನು ಸೂಚಿಸುವ ಠರಾವು ಮಾಡಿದ್ದಲ್ಲದೆ, ಒಂದು ವೇಳೆಗೆ ಮೇಲಿನ ಮಸೂದೆಯು ಜಾರಿಗೆ ಬಂದರೆ ಅವರೆಲ್ಲರೂ ಥಿಯೇಟರುಗಳಲ್ಲಿ ಕೆಲಸಮಾಡಲು ಸಿದ್ಧರಾಗಿದ್ದಾರೆಂದು ತಿಳಿಸಿರುವರಂತೆ.

o o o

### ಏಕೀಕರಣವಾದರೆ

ಕರ್ನಾಟಕ ಏಕೀಕರಣವಾದರೆ ದಕ್ಷಿಣ ಕನ್ನಡದಿಂದ ಆರು ಮಂತ್ರಿಗಳನ್ನಾರಿಸಬೇಕೆಂದು ಈಗಲೇ ದಕ್ಷಿಣ ಕನ್ನಡದ ಪ್ರಾಮುಖ್ಯ ಸಂಸ್ಥೆಗಳು ಒಟ್ಟು ಸೇರಿ ಒಂದು ಠರಾವನ್ನು ಮಾಡಿ ಏಕೀಕರಣ ಚಳವಳದ ಅಧಿಕಾರಿಗಳಿಗೆ ಕಳುಹಿಸಿರುವರಂತೆ. ಉತ್ತರವು ಇನ್ನೂ ಬರಲಿಲ್ಲವಾದರೂ ಸಂಬಂಧಪಟ್ಟವರು ಇದಕ್ಕೆ ವಿರೋಧವಾಗಿಲ್ಲವೆಂದು 'ಪ್ರಜಾವಾಣಿ'ಪತ್ರಿಕೆಯ 'ಡಿಪ್ಲೊಮೆಟಿಕ್' ಸುದ್ದಿಗಾರರು ಬರೆದಿದ್ದಾರೆ.

o o o

### ಇಂಗ್ಲೆಂಡಿಗೆ ಅಂತರಂಗ

ಬ್ರಿಟನ್ ಮತ್ತು ಜರ್ಮನಿಗಳ ಪ್ರಕಟಣಾ ಮಂತ್ರಿಗಳು 'ಅಂತರಂಗ' ವಾರಪತ್ರಿಕೆಯನ್ನು ತರಿಸಲು ಯೋಚಿಸುತ್ತಿದ್ದಾರೆಂದು "ರೂಟರ್" ತಂತಿಯು ಹೇಳುತ್ತಿದೆ.

---

# ಸಾಹಿತಿಗಳ ಸಮ್ಮೇಳನದಲ್ಲಿ-

# ಪಂಡಿತರ ಮಹತ್ವದ ಚರ್ಚೆ

ಮಂಗಳೂರು, ೨೦—೮—'೩೮

(ನಮ್ಮ ವಿಶೇಷ ಪ್ರತಿನಿಧಿಗಳಿಂದ)

**[ಓದುವುದೊಂದಲ್ಲದೆ ಮತ್ತೆಲ್ಲಾ ಹಕ್ಕುಗಳು ಕಾದಿಡಲ್ಪಟ್ಟಿವೆ.]**

ಅಭೂತಪೂರ್ವವಾದ ಕನ್ನಡ ಸಾಹಿತಿಗಳ ಸಮ್ಮೇಲನವೊಂದು ಕಳೆದವಾರ ಮಂಗಳೂರಿನ "ಶಿವ ಸದನ"ದಲ್ಲಿ ಸೇರಿತು. ಕರ್ನಾಟಕದ ಕೀರ್ತಿವೆತ್ತ ಸಾಹಿತಿಗಳೆಲ್ಲರೂ ಬಂದಿದ್ದರು. ಕರ್ನಾಟಕದ ಪ್ರಸಿದ್ಧ ಕವಿಗಳೊಬ್ಬರು ಅಧ್ಯಕ್ಷಸ್ಥಾನವನ್ನಲಂಕರಿಸಿದರು. ಪ್ರಾರ್ಥನೆಯು ಶ್ರೀಮತಿ ಕೀರವಾಣಿ ಸುಬ್ಬಮ್ಮನವರಿಂದ ಮಾಡಲ್ಪಟ್ಟ ಬಳಿಕ ಕಾರ್ಯಾರಂಭವಾಯಿತು.

ಶ್ರೀ. ಸುಬ್ಬಾ ಜೋಯಿಸರು ಎದ್ದು ನಿಂತು ಕರ್ನಾಟಕದ ಕವಿಗಳ ಕಾವ್ಯಗಳ ಕುರಿತು ಮಾತಾಡುತ್ತಾ-"ನಮ್ಮಲ್ಲಿ ಕನ್ನಡ ಭಾಷೆಯಲ್ಲಿ ಅತ್ಯದ್ಭುತ ಪಾಂಡಿತ್ಯವನ್ನು ಪಡೆದವರಿದ್ದರೂ ಅವರು ಬರೆದ ಕವನಗಳಲ್ಲಿ ಉಪಯೋಗಿಸಿದ ಶಬ್ದಗಳನ್ನು ನೋಡುವಾಗ ನನಗೆ ಬೇಸರವೆನಿಸುತ್ತದೆ. ಉದಾಹರಣೆಗಾಗಿ-ಹಲವು ಕಾವ್ಯಗಳಲ್ಲಿ "ಭೂಪ ನಿಂತೆಂದಾ" ಎಂದು ಬರೆಯಲಾಗಿದೆ. ಯೋಚಿಸುವುದಿದ್ದರೆ ಇಂಥ ಪ್ರಯೋಗಗಳನ್ನು ಮಾಡುವುದರಿಂದ ಕನ್ನಡ ಸಾಹಿತ್ಯದ ಕೊರಳನ್ನೇ ಹಿಸುಕಿದಂತಾಗುತ್ತದೆ. "ಭೂಪನಿಂತೆಂದಾ" ಎಂಬುದರ ಶಬ್ದ ವಿಂಗಡನೆ ಮಾಡಿದರೆಭೂಪ+ನಿಂತು+ ಎಂದಾ- ಎಂದಾಗುವುದಿಲ್ಲವೆ? ಭೂಪತಿಗಳು ನಿಂತೇ ಹೇಳಬೇಕೆಂಬ ನಿಯಮವುಂಟೆ? 'ಭೂಪ ಕುಳಿತೆಂದಾ'- 'ಮಲಗೆಂದಾ" ಎಂದು ಮೊದಲಾಗಿ ಹೇಳಿದರೆ ಆಗುವುದಿಲ್ಲವೆ? ಇತ್ತೀಚೆಗೆ ಪ್ರಸಿದ್ಧ ಸಾಹಿತಿಗಳೊಬ್ಬರು ಬರೆದ ಯಕ್ಷಗಾನ ಪ್ರಸಂಗದಲ್ಲಿ "ಏನೆಂದೆ ತಮ್ಮಾ ನೀನೇನೆಂದೆ" ಎಂದು ಬರೆಯಲಾಗಿದೆ. "ಏನು" ಎಂದು ಕೇಳಿರುವುದು ಸಾಲದೆ ಪುನಃ "ಎಂದೆ?" ಎಂದು ಕೇಳುವುದರ ಅರ್ಥವೇನು? ಕನ್ನಡಕ್ಕೆ "ಎಂದೆ" ಎಂಬೀ ಮಲೆಯಾಳೀ ಶಬ್ದವನ್ನು ತರುವ ಅವಶ್ಯಕತೆಯಾದರೂ ಎಲ್ಲಿದೆ? ಇಷ್ಟೇ ಅಲ್ಲ, ಮೊದಲು ಹೇಳಿದ ಚರಣಕ್ಕೆ ಇನ್ನೊಂದು ಅರ್ಥವಾಗುತ್ತದೆ. ಭೂಪ+ಕೇಳು+ಎಂದಾ? ಕಲ್ಲು ಕಡಿಯುವ ಕೇಳು ಮೇಸ್ತ್ರಿಗೂ ಭೂಪನಿಗೂ ಸಂಬಂಧವಾದರೂ ಯಾವುದು? ಆದುದರಿಂದ ನಮ್ಮ ಕವಿ ಕುಟುಂಬದವರು ಹೀಗೆಲ್ಲಾ ಬರೆದು ಸರಸ್ವತಿಯ ಗೋಣು ಮುರಿಯಬಾರದೆಂದೇ ನನ್ನ ವಿನಮ್ರ ಸೂಚನೆ" ಯೆಂದು ಹೇಳಿ ಮುಗಿಸಿದರು.

ಆದಾದೊಡನೆಯೆ ಶ್ರೀ. ತಿಪ್ಪಾಶಾಸ್ತ್ರಿಗಳು ಎದ್ದುನಿಂತು-"ಮೊದಲಿನ ಕವಿಗಳ ವಿಮರ್ಶೆಯು ಆಧಾರಸಹಿತವಾದುದೆಂದು ನನಗನಿಸುವುದಿಲ್ಲ. ರಾಮಾಯಣ ಕಾಲದಲ್ಲಿ ಸೇತುವೆಯನ್ನು ಕಟ್ಟಲು ಅವನಿಗೆ ಸಹಾಯಮಾಡಿದ ವಾನರರು ಕೇರಳದವರೆಂದು ಇತಿಹಾಸ ಪ್ರಸಿದ್ಧವಾಗಿದೆ. ರಾಮಾಯಣ ಕಾಲದಲ್ಲಿ ಮನುಷ್ಯರಿಗೆ ಬಾಲವಿತ್ತೆಂಬುದನ್ನು ಡಾರ್ವಿನನು ಸ್ಪಷ್ಟವಾಗಿ ಹೇಳಿದ್ದಾನೆ. ಇಷ್ಟು ಮಾತ್ರವಲ್ಲ, ವಾನರ ಸ್ವಭಾವವು ಇನ್ನೂ ನಮ್ಮಲ್ಲಿ ಬುದ್ಧಿ ರೂಪದಲ್ಲಿದೆಯೆಂಬುದನ್ನು ನಾವು ಹೇಳಬೇಕಾಗಿದೆ.

(ಕೇಳಿರಿ, ಕೇಳಿರಿ ಎಂಬ ಗುಲ್ಲು.)

ಶ್ರೀ. ಶಾಸ್ತ್ರಿಗಳು ಮುಂದುವರಿಸುತ್ತಾ ಹೇಳಿದರು: "ಆದುದರಿಂದಲೇ ಇವತ್ತು ಕೇರಳದಿಂದ ನಮ್ಮಲ್ಲಿಗೆ ಕಲ್ಲು ಕಟ್ಟಲು ಕೇಳು ಮೇಸ್ತ್ರಿಗಳೇ ಮೊದಲಾದವರು ಬರುತ್ತಿರುವುದು. ಇದನ್ನು ನೋಡಿದರೆ ಆ ಪ್ರಯೋಗವು ಸಾಧುವೆಂದೇ ನನ್ನ ಅಭಿಪ್ರಾಯ.

ಆಗ ಎರಡು ಮೂರು ಪಂಡಿತರು ಎದ್ದು ನಿಂತರು. ಗಲಭೆಯಾಯಿತು. ಕೂಡಲೆ ಅಧ್ಯಕ್ಷರು "ಸಮಾಧಾನವೇ ಕವಿವರ್ಗದವರ ಪ್ರಾಮುಖ್ಯವಾದ ಗುಣ" ವೆಂದೊಡನೆ ಎಲ್ಲರೂ ಕುಳಿತು ಒಬ್ಬರು ಮಾತ್ರ ಎದ್ದು ನಿಂತರು.

"ಆಯ್ಯಾ ತಿಪ್ಪಾ ಶಾಸ್ತ್ರಿಗಳೆ, ಗಂಭೀರವಾಗಿ ಮಾತಾಡುತ್ತಿರುವ ನೀವು ೧೮೬೮ರಲ್ಲಿ ಬರೆದ ಯಕ್ಷಗಾನ ಪ್ರಸಂಗದಲ್ಲಿ ನೀವು "ಏನಾಯಿತಿಂದೀಗ" ಎಂದು ಬರೆಯಲಿಲ್ಲವೆ? ಏನು, ಆ ಸಂದರ್ಭದಲ್ಲಿ ನಾಯಿ ನಿಮ್ಮದನ್ನು ತಿನ್ನಲು ಬಂತೇ? ಬಾರದಿದ್ದರೆ ಅದರ ಅರ್ಥವಾದರೂ ಏನು? ಏ+ ನಾಯಿ+ ತಿಂದೀಗ. ಇದಕ್ಕಿಂತಲೂ ಹೆಚ್ಚಿನ ಅಸಂಬದ್ಧ ಪ್ರಯೋಗವಿದೆಯೆ?

ಇನ್ನೊಬ್ಬರು: ಅಯ್ಯಾ, ನೀವೇನು ಕನ್ನಡ ಸಾಹಿತ್ಯವನ್ನು ದ್ಧಾರ ಮಾಡಿರುವಿರೋ? "ಹೇಲತಾ + ಕೋಮಲಾಂಗಿ" ಎಂದು ನೀವು ನಿಮ್ಮ ಕಾವ್ಯದಲ್ಲಿ ಅರ್ಜುನನು ದ್ರೌಪದಿಯನ್ನು ಸಂಬೋಧಿಸುವುದಿಲ್ಲವೆ? ದ್ರೌಪದಿಯು ಹಾಗೇಕೆ ಮಾಡಬೇಕು?"

ಸಭೆಯವರು: ನಾಚಿಕೆ! ನಾಚಿಕೆ!!

ಆಗ ಶ್ರೀ. ಸುಬ್ರಾಯ ಪಂಡಿತರು ಗಿಡ್ಡ ದೇಹವಾದುದರಿಂದ ಬೆಂಚಿನಮೇಲೆ ನಿಂತು ಅಯ್ಯಾ! ಎಲ್ಲರೂ ಇತರರ ತಪ್ಪನ್ನೇ ಕಂಡು ಹಿಡಿಯುವುದಲ್ಲದೆ ಅವರವರ ತಪ್ಪುಗಳನ್ನು ಯಾರೂ ಲಕ್ಷಿಸುವುದಿಲ್ಲ. ನನ್ನ ಮೊದಲು ಮಾತಾಡಿದವರು "ಗಣಗಳೊಳು ಹೆಗ್ಗಣನೀತ ಗಣೇಶ" ಎಂದು "ಸೋಮಾವತಿ ಪ್ರಸಂಗ"ದಲ್ಲಿ ಬರೆಯಲಿಲ್ಲವೇ? ಇದರ ಹುರುಳೇನು? ಇದರ ಸಂಧಿ ವಿಂಗಡಿಸಿದರೆ ಯಾವ ಅರ್ಥವಾಗುತ್ತದೆ? "ಗಣಗಳೊಳು+ ಹೆಗ್ಗಣ+ ನೀ+ ತಗಣೇಶ" ಲೋಕದಲ್ಲಿ ತಗಣೆಗಳ ಈಶನು ಹೆಗ್ಗಣನಾಗುವುದಾದರೂ ಉಂಟೆ?

ಸಭೆಯಲ್ಲಿ ನೀರವ, ನಿಶ್ಶಬ್ದ! ಆಗ ಶ್ರೀ. ಪೆಂಗಾಚಾರ್ಯ (ವಿದ್ವಾನ್)ರು ಎದ್ದು ನಿಂತು ಕವಿಕುಲ ತಿಲಕರೆ, ನನಗೂ ಕಾವ್ಯ ವಿಮರ್ಶೆಯನ್ನು ಮಾಡಬೇಕೆಂಬ ಉತ್ಸಾಹವು ಅನಿರೀಕ್ಷಿತವಾಗಿ ಉಂಟಾಗಿಹೋಯಿತು. ನವಕವಿಗಳ ವಿಚಾರವಂತೂ ಬಿಡಿರಿ ಮೊದಲಿನವರು "ಮಂಗಳಂ ಕರಿವದನ" ಎಂದು ತಮ್ಮ ಕಾವ್ಯಗಳನು, ಪ್ರಾರಂಭಿಸಿದ್ದಾರಲ್ಲಾ 'ಕರಿವದನ'



ನಮ್ಮ ಚಿತ್ರಗಾರರ ದೃಷ್ಟಿಯಲ್ಲಿ

**ವಾಲೇಸ್ ಬೀಯರಿ**

ಎಂದು ಜರೆಯುವುದರಿಂದ ಗಣಪತಿಯ ಮುಖ ಕಪ್ಪೆಂದಾಗುವುದಿಲ್ಲವೆ?

ಇನೊಬ್ಬ ಕವಿಗಳು ಮಧ್ಯದಲ್ಲಿ ಬಾಯಿಹಾಕಿ-"ಅಯ್ಯಾ ಪೆಂಗಾಚಾರ್ಯರೇ, ನಿಮಗೆ ಸಂಧಿ ವಿಂಗಡಿಸಲು ಗೊತ್ತಿಲ್ಲ "ಕರಿವದನ"ದ ಸಂಧಿ ಹೇಗೆಂದರೆ- ಕರಿವ+ ದನವೆಂದು. ಆದುದರಿಂದ ಅಲ್ಲಿ ಮಂಗಳವು ಗಣಪತಿಗಲ್ಲ, ಈಶ್ವರನ ಮಡದಿಯಾದ ಪಾರ್ವತಿಗೆ. ಪ್ರಾಚೀನ ಕವಿಗಳು ಕವಿಸ್ವಾತಂತ್ರ್ಯವನ್ನುಪಯೋಗಿಸಿ ಪಾರ್ವತಿಯನ್ನು ಕರಿಯುವಂಹತ ದನವೆಂದು ಹೇಳಿದ್ದಾಗಿದೆ.

ಆಗ ಸುಬ್ಬಾಲಿಂಗ ಜೋಯಿಸ್ರು ಎದ್ದು ನಿಂತು—'ಬಂಧುಗಳೇ, ಅದರ ಅರ್ಥ ಹಾಂಗಿಲ್ಲ, 'ಕರಿ' ಅಂದರೆ ಆನೆ 'ವ' ಅಂದರೆ ಅಥವಾ, 'ದನ' ಅಂದರೆ ಪಶು. ಆದ್ರಿಂದಾ ಕರಿವದನ ಅಂದರೆ ಆನೆ ಅಥವಾ ಪಶುವೆಂದರ್ಥ.

ಅಸಾಧ್ಯ ಚರ್ಚೆಯಾರಂಭವಾದುದರಿಂದ ಅಧ್ಯಕ್ಷರು ಆ ವಿಷಯವನ್ನು ಮಾರನೆ ದಿನಕ್ಕೆ ಮುಂದುವರಿಸಿದರು.

ಶ್ರೀ. ಸೋಮನಾಥ ಭಟ್ಟರು ಎದ್ದು ನಿಂತು ಆಕ್ಷೇಪಾರ್ಹವಾದ ಕೆಲವು ಪ್ರಯೋಗಳನ್ನು ಹೇಳಿದರು: ಹಾರವಲಯಂ, ಕೌಮುದಿ, ಸೂಕರ, ಇತ್ಯಾದಿ. ಅವರ ಕೊನೆಯ ಭಾಷಣದಲ್ಲಿ ಭಟ್ಟರು-ಅಯ್ಯಾ, ಕವಿಗಳೇ, ಹಲವು ಭಾಷೆಗಳಿರುವ ಈ ಕಾಲದಲ್ಲಿ ಸಂಶಯಾತ್ಮಕವಾದ ಕೆಲವು ಶಬ್ದಗಳು ಕನ್ನಡದಲ್ಲಿರುವುದು ಉತ್ತಮವಲ್ಲ. ಉದಾಹರಣೆಗಾಗಿ ಕೌಮುದಿ ಎಂಬ ಶಬ್ದಕ್ಕೆ ಬೆಳ್ದಿಂಗಳೆಂಬ ಅರ್ಥವಿದ್ದರೂ ಕೌ (Cow) ಎಂದರೆ ಇಂಗ್ಲಿಷಿನಲ್ಲಿ ದನವೆಂದಾಗಿರುವುದರಿಂದ ಕೌಮುದಿಯೆಂದರೆ ದನ ಮುದಿಯೆಂದಾಗುತ್ತದೆ. ಎರಡನೆಯದಾಗಿ ಸೂಕರ ಎಂದರೆ ಇನ್ನೊಂದು ಅರ್ಥವಾಗುತ್ತದೆ. ಸು+ ಎಂದರೆ ಒಳ್ಳೆಯದು ಕರ ಎಂದರೆ ತುಳು ಭಾಷೆಯಲ್ಲಿ ಮಡಕೆ. ಸೂಕರಯೆಂಬುದು ಹಂದಿಯ ಬದಲು ಒಳ್ಳೆಯ ಮಡಕೆಯಾಗಬಹುದು. ಅಥವಾ 'ಸೂ' ಎಂದರೆ ತುಳುವಿನಲ್ಲಿ ಬೆಂಕಿಯೆಂಬ ಅರ್ಥ

ವೂ ಆಗುತ್ತದೆ. 'ಹಾರವಲಯ' ಎಂಬುದಕ್ಕೆ ನಾನಾರ್ಥಗಳಿವೆ. 'ಹಾರವ+ಲಯಂ' ಎಂದರೆ ಬ್ರಾಹ್ಮಣ ಸತ್ತನೆಂದಾಯಿತು. 'ಹಾ!+ರವ+ಲಯಂ' ಎಂದರೆ 'ಹಾ+ಶಬ್ದ+ಸತ್ತು ಹೋಯಿತು' ಎಂದಾಗುತ್ತದೆ.

ಕೊನೆಗೆ ಸಮ್ಮೇಲನದಲ್ಲಿ ಈ ಕೆಳಗಿನ ಪ್ರಯೋಗಗಳು ಕನ್ನಡ ಭಾಷಾಭಿಮಾನಿಗಳಿಂದ ಉಪಯೋಗಿಸಲ್ಪಡಬಾರದೆಂದಾಯಿತು.

ಕರಿವದನ, ಕೌಮುದಿ, ಹಾರವಲಯ, ಸೂಕರ, ಭೂಪಕೇಳಿಂದಾ, ಕೇಳು ಧರ್ಮಜ, ವಾರಿಜಾಕ್ಷಿ—ಇತ್ಯಾದಿ.

ಸಮ್ಮೇಲನದ ಕೊನೆಯ ಕಾರ್ಯಕ್ರಮವಾಗಿ ಪ್ರಸಿದ್ಧ ಕವಿಗಳು ತಮ್ಮ ಕೃತಿಗಳನ್ನು ಓದಿ ಹೇಳಿದರು.

ಸ್ವಾರಸ್ಯವಾದುವುಗಳ ಅಂಶಗಳನ್ನು ಕೆಳಗೆ ಕೊಡಲಾಗಿದೆ.

ಶ್ರೀ ರಾಮಶಾಸ್ತ್ರಿಗಳ ತಾತ್ವಿಕ ಕವನ. ಹೆಸರು 'ದೇವನಸ್ತಿತ್ವ'

'ಇರುವೆ, ಇರುವೆ,
ನೀನೆಲ್ಲಿರುವೆ,
ಕಿಸೆಯೊಳಗಿರುವೆ,
ಮೂಗಿನೊಳಿರುವೆ,
ದೇವಾ, ನೀ ಎಲ್ಲಿರುವೆ?

ಶ್ರೀ 'ಕಟುರನ್ನ' ಯಾನೆ ಸೋಮಭಟ್ಟರು ಈ ಆಧುನಿಕ ಕವಿತೆಯನ್ನೋದಿದರು:

ನಿನ್ನ ಮನೆಗೆ ನಾನು ಬರಲು,
ನೀನು ಏನ ಕೊಡುವೆ ನನಗೆ,
ಮಧುರನುಡಿಯದೆನಗೆ ಬೇಡ,
ಕಾಫಿ ರೊಟ್ಟಿಯೊಂದು 'ಬೀಡ'

ಈ ಕವಿತೆಯು ರಸಿಕತೆಯಿಂದ ತುಂಬಿ ತುಳುಕುತ್ತಿದೆಯೆಂದು ಅಧ್ಯಕ್ಷರು ಹೇಳಿದರು.

ಕೊನೆಗೆ ಸರಳಗನ್ನಡದ ಪದ್ಯವೊಂದನ್ನು ಸಾಹಿತ್ಯ ಶಿರೋಮಣಿ ತಿಪ್ಪಾ ಶಾಸ್ತ್ರಿಗಳೋದಿದರು.

'ಘಥ ಘಥಿಲೆನೆ, ನಿಠಿ ನಿಠಿ
ಚಠ ಪಠಲೆನೆ
ಘುಥು ಘಥಿಸಿತು ಕಾನನದ
ಮೆಳೆ ಹಿಂಡುಗಳ್'

ಇದರ ಶಬ್ದಾಲಂಕಾರ ಮತ್ತು ರಚನಾಗಾಂಭೀರ್ಯವು ಜೈಮಿನಿಗಿಂತಲೂ ಮಿಗಿಲಾಗಿದೆಯೆಂದು ಹೇಳಲಾಯಿತು. ಎಲ್ಲವೂ ಮಹಾಪ್ರಾಣಗಳಿಂದೊಡಗೂಡಿರುವುದರಿಂದ ಇದರ ಮಹತ್ವಿಕೆಯು ಇನ್ನಷ್ಟು ಹೆಚ್ಚಿದೆಯಂತೆ.

ಶ್ರೀ ಕಂಗಡಲು ವಾಮನಪೈಗಳು ಕೆಳಗಿನ ಪದ್ಯವನ್ನೋದಿದರು:

ಚಾಟಯನು ತರಹೇಳಿ ರಂಗನು
ಸೂಟಿನಲಿ ಕರಿಯಾದುದನು ಕಂ
ಡೇಟನೊಂದನುಕೊಟ್ಟ ಗ್ಲಾಸನು
ಹಿಡಿದ ಹುಡುಗನಿಗೆ.
ಏಟು ಬೆನ್ನಿಗೆ ಬಿದ್ದ ಕೂಡಲೆ
ಬೇಟದಲಿ ಕಿವಿ ಹಿಡಿದು ಭರದಲಿ
ಮೀಂಟಿದನು ವೆಂಕಟನು ಹುಡು
ಗನು ಚೀರಿಕೊಳುವನಕ

ಕೊನೆಗೆ ಅಧ್ಯಕ್ಷರು ಎದ್ದು ನಿಂತು—ಮಹಾ ವಿದ್ವಾಂಸರೆ, ನನ್ನನ್ನು ಈ ದಿನ ನೀವು ಈ ಘನ ಸ್ಥಾನದಲ್ಲಿ ಕುಳ್ಳಿರಿಸಿರುವುದಕ್ಕಾಗಿ ನಾನು ನಮಗೆ ತುಂಬಾ 'ಇದು' ಆಗಿರುತ್ತೇನೆ. ಇವತ್ತು ನೀವು ಮಾಡಿದ ಚರ್ಚೆಯನ್ನು ನೋಡುವಾಗ ನನಗೆ ಬಹಳ 'ಇದು' ಆಗುತ್ತದೆ. ನಮ್ಮ ಭಾಷೆಯಲ್ಲಿ ತುಂಬಾ ಶಬ್ದಗಳಿರುವುದರಿಂದಲೇ ಇಷ್ಟೆಲ್ಲ ತಪ್ಪುಗಳಾಗುತ್ತಿರುವುದು. ಹಿಂದಿನವರು ಕೈಗೆ ಬಂದ ಅರ್ಥ ಬರೆದಿದ್ದಾರೆ. ಹಿಂದಿನವರನ್ನೂ ಅನುಕರಿಸುವುದು ಉತ್ತಮವಲ್ಲ. ಆದುದರಿಂದ ನೀವೆಲ್ಲರೂ ನಿಮ್ಮ ಸ್ವಂತ ಶಬ್ದ ಕೋಶಗಳನ್ನೂ ಬರೆಯಬೇಕು. ಮೊದಲು ಸಮ್ಮೇನದವರು 'ಅಪಾರ್ಥ ಶಬ್ದಾವಳಿ'ಯೆಂಬುದನ್ನೂ ಬರೆದು ಪ್ರಕಟಿಸಬೇಕು. ಕೊನೆಯದಾಗಿ ನಾನು ನಿಮಗೆ ತುಂಬಾ 'ಇದು' ಆಗಿದ್ದೇನೆಂದು ಮತ್ತೊಮ್ಮೆ ಹೇಳುತ್ತೇನೆ. (ಇದು ಎಂದರೇನೆಂದು ಅಧ್ಯಕ್ಷರಿಗೇ ಗೊತ್ತು.) ಹೀಗೆ ಮೊದಲನೆ ದಿನದ ಸಮಾರಂಭವು ಕೊನೆಗೊಂಡಿತು.

---

## ನಾನಾರ್ಥ ಶಬ್ದಾವಳಿ

ಬರೆದವರು: ] ['ನಾನಾರ್ಥಿ'

**ನಾನಾರ್ಥ:** ನಾ+ನಾ+ಅರ್ಥ. (ಕೊಂ) ಅರ್ಥವೇ ಇಲ್ಲದಿದ್ದದ್ದು; ನಾನ+ಅರ್ಥ (ಹಿಂ) ಅಜ್ಜ ಹೇಳಿದ ಅರ್ಥ.

**ಸ್ವರಾಜ್ಯ:** ಸ್ವರ+ಆಜ್ಯ (ತುಪ್ಪ) ತುಪ್ಪ ಕಾಯಿಸುವಾಗ ಉಂಟಾಗುವ ಶಬ್ದ. ಸ್ವರ+ರಾಜ್ಯ. ಗಲಾಟೆಯಾಗುವ ಸ್ಥಳ ಅಥವಾ ಗ್ರಾಮೊಫೋನಿರುವ ಸ್ಥಳ.

**ಸಂದೇಶ:** ಸಂ+ದೇಶ. ಸಣ್ಣದೇಶ. ಸಂದ+ಈಶ ಸತ್ತುಹೋದ ಒಡೆಯ.

# ಹಸಿದವರಿಗೆ ಮಾತ್ರ



ನಮ್ಮ ಚಾಣಾಕ್ಷ ಪ್ರತಿನಿಧಿಗಳಿಂದ.



***(Antaranga Special By Cable)***

●

**ಆಗೋಸ್ತು:**

**ತಾ. ೧:** ಜಗದ್ವಿಖ್ಯಾತರಾದ ಜಾರ್ಜ್ ಬರ್ನಾರ್ಡ್ ಷಾರವರಿಗೂ ಕವಿ ರವೀಂದ್ರನಾಥ ಟಾಗೋರರಿಗೂ ತಮ್ಮ ಗಡ್ಡದ ವಿಷಯದಲ್ಲಿ ಅಭಿಪ್ರಾಯ ವ್ಯತ್ಯಾಸವುಂಟಾಗಿದೆ. ಒಬ್ಬರು ಗಡ್ಡದ ವಿಚಾರವನ್ನು ಪ್ರಕೃತಿಗೇ ಬಿಟ್ಟುಬಿಡುವುದು ಉತ್ತಮವೆನ್ನುವಾಗ ಇನ್ನೊಬ್ಬರು ಗಡ್ಡವನ್ನು ಕತ್ತರಿಸಲೇ ಬೇಕೆಂದು ವಾದಿಸುತ್ತಿದ್ದಾರೆ. ಇದರಿಂದಾಗಿ ಗಡ್ಡಬೆಳೆಸುವವರು ಕಂಗಾಲಾಗಿದ್ದಾರೆ.

**ತಾ. ೨೨:** ಹೆರ್ ಹಿಟ್ಲರರು ಜಗತ್ತಿನ ಶಾಂತಿಯನ್ನು ರಕ್ಷಿಸಲು ಕೈಲಾದ ಯತ್ನ ಮಾಡುತ್ತಿದ್ದಾರೆಂಬುದನ್ನು ಯಾರಾದರೂ ಅಲ್ಲಗಳೆದರೆ ಅವರು ಸರ್ವಾಧಿಕಾರವನ್ನೇ ಬಿಟ್ಟುಬಿಡುವರೆಂದು ಹೇಳಿದ್ದಾರೆ.

**ತಾ೨೪:** ಪಂಡಿತನೆಹರುಗಳು ವಿವರಿಸಿದ ವಿದೇಶ ಧೋರಣೆಯು ಭಾರತಕ್ಕೆ ಹೇಳಿಸಿದುದಲ್ಲವೆಂದು ಹೇಳಿರುವುದಕ್ಕಾಗಿ ಲಾರ್ಡ್ ವಿಲ್ಲಿಂಗ್ಡನರು ಶ್ರೀ. ಸಾವರ್ಕರರನ್ನು, ಅಭಿವಂದಿಸಿದ್ದಾರೆ. ಮತ್ತು ಮಿ|| ಜಿನ್ನರನ್ನೂ. ಸಾವರ್ಕರರನ್ನೂ ಅವರು ಸ್ವಾಗತಿಸಿ, ಭಾರತದ ವಿದೇಶ ಧೋರಣೆಯನ್ನು ಯುರೋಪಿಗೆ ತಿಳಿಸಬೇಕೆಂದು ಕೇಳಿಕೊಂಡಿದ್ದಾರೆ.

**ತಾ೨೪:** ಕಾರ್ನಾಡ್ ಸದಾಶಿವರಾಯರ ಸ್ಮಾರಕನಿಧಿಗೆ ಶ್ರೀ ಮೊರಾರ್ಜಿಯವರು ೧,೦೦೦,೦೦೦,೦೦೦ ರೂಪಾಯಿಗಳನ್ನು ಕೊಟ್ಟಿದ್ದಾರಂತೆ. ಸ್ಥಳೀಕ ಕಾಂಗ್ರೆಸ್ ಕಮಿಟಿಯು ಈ ಹಣದ ಕುರಿತು ಚರ್ಚಿಸಲು ಎಲ್ಲಾ ಸದಸ್ಯರಿಗೆ ತಂತಿ ಮೂಲಕ ನೋಟಿಸು ಕೊಟ್ಟಿದೆ. ಪತ್ರಿಕೆಗಳು ಸ್ಮಾರಕವು ಹೇಗಿರಬೇಕೆಂಬ ಕುರಿತು ಉದ್ದುದ್ದ ಸಂಪಾದಕೀಯ ಸೂಚನೆಗಳನ್ನು ಕೊಡಲಿವೆ.

**ತಾ. ೨೫:** ಭಾರತದಲ್ಲಿ ಸಂತತಿ ಪ್ರತಿಬಂಧಕ ಕಾರ್ಯವನ್ನು ಯೆಶಸ್ವಿಯಾಗಿಮಾಡಿ, ಜನಸಂಖ್ಯೆಯು ಹೆಚ್ಚದಂತೆ ನೋಡಿ ದಾರಿದ್ರ್ಯವನ್ನು ತೊಲಗಿಸುವರೆ ಯೋಗ್ಯ ಇಲಾಖೆಯೊಂದನ್ನು ತೆರೆಯದಿದ್ದರೆ ಮಿ|| ನೆವಿಲ್ ಚೇಂಬರ್ಲೆನರು ತನ್ನ ಪ್ರಧಾನ ಮಂತ್ರಿತ್ವಕ್ಕೆ ರಾಜಿನಾಮೆ ಯೀಯುತ್ತೇನೆಂದು ಬ್ರಿಟಿಷ್ ಮಂತ್ರಿಮಂಡಲಕೆ ಎಚ್ಚರಿಕೆಯನ್ನೀಯಲಿದ್ದಾರೆ ಈಗಾಗಲೇಭಾರತದ ಮಂದ ಪಕ್ಷೀಯರು ತಮ್ಮ ಅಭಿವಂದನಾ ತರಾವುಗಳನ್ನು ಚೇಂಬರ್ಲಿನರಿಗೆ ಕಳುಹಿಸ ತೊಡಗಿದ್ದಾರೆ.

**ತಾ. ೨೬:** ಜಸ್ಟಿಸ್ ಪಾರ್ಟಿಯ ಧುರೀಣರು ಮದ್ರಾಸಿನಪ್ರಾಮುಖ್ಯ ಜ್ಯೋತಿಷಿಯೊಬ್ಬರನ್ನು ಕರೆದು ಈ ಕೆಳಗಿನ ವಿಷಯಗಳ ಕುರಿತು ಭವಿಷ್ಯ ಕೇಳುತ್ತಿದ್ದಾರೆ:-

೧. ಹಿಂದೀ ವಿರೋಧ ಚಳವಳವು ಯಶಸ್ವಿಯಾಗಿ, ಜಸ್ಟಿಸ್ ಪಕ್ಷವು ಪುನಃ ಮಂತ್ರಿಮಂಡಲವನ್ನು ರಚಿಸುವುದೆ?

೨. ವಿಜಯವು ಸಿಗಬೇಕಾದರೆ ಎಲ್ಲಿಗೆ ತೀರ್ಥಯಾತ್ರೆ ಮಾಡಬೇಕು ಮತ್ತು ಯಾವ ದೇವತೆಯನ್ನು ಪೂಜಿಸಬೇಕು.

**ತಾ .೨೭:** ಜಪಾನಿನ ಜನರಲ್ ಇಟಾಗಕಿಯವರೂ ಚೀನದ ಶಾಂಗ್ ಕೈಶೇಕರೂ ತಮ್ಮೊಳಗಿನ ಜಗಳವನ್ನು ತೀರ್ಮಾನ ಮಾಡಬೇಕೆಂದು ಮಹಾತ್ಮಾ ಗಾಂಧಿಜಿಯವರನ್ನು ಕೇಳಿಕೊಳ್ಳಲಾರಂಭಿಸಿದ್ದಾರೆ.

**ತಾ. ೨೮:** ಮಹತ್ಮಾಜಿಯವರು ಚೀನಾ ಜಪಾನ್‌ಗಳೊಳಗೆ ರಾಜಿ ಮಾಡಿಹಾಕುವುದಕ್ಕೆ ಲೀಗ್ ಆಫ್ ನೇಶನ್ಸ್ ಸಭೆಯು ತನ್ನ ಬಲವಾದ ವಿರೋಧವನ್ನು ಠರಾವೊಂದರ ಮೂಲಕ ಸೂಚಿಸಿ, ಗಾಂಧಿಜಿಯವರು ರಾಜೀಪ್ರಸ್ತಾಪಕ್ಕೆ ಕೈಹಾಕಿದರೆ ಜನಾಂಗಸಭೆಯು ನಿರರ್ಥಕವಾದಂತಾಗುತ್ತದೆ ಎಂಬ ಅಭಿಪ್ರಾಯವನ್ನು ಸ್ಪಷ್ಟಗೊಳಿಸಿದೆ. ಗಾಂಧಿಜಿಯವರು ಜನಾಂಗಸಭೆಯ ಸೂಚನೆಯಿಂದಾಗಿ ಬೇಸರಕ್ಕೊಳಗಾಗಿ ಯಾರಿಗೂ ತಿಳಿಯದಂತೆ ಮೌನ ಉಪವಾಸವ್ರತವನ್ನು ಕೈಗೊಳ್ಳುತ್ತಿದ್ದಾರೆ.

Join our new Scheme of Deposit and enrich yourself

by saving petty cashes.

# SAVE AS YOU PLEASE

*Refundable with $6\frac{1}{4}$ per cent after 5 years.*

**SUPPLY AGENCY**
**LIMITED, UDIPI.**

**FINANCE DEPARTMENT,**
**Vyasa Bhavanam,**
**Car Street.**

# AMALAKI HAIR OIL ಆಮಲಕೀ ತೈಲ

ವಿದ್ಯಾರ್ಥಿಗಳಿಗೂ, ಸಕಲ ಸ್ತ್ರೀಪುರುಷರಿಗೂ, ನಿತ್ಯ ಕೇಶಪ್ರಸಾದನಾರ್ಥ ಪುಷ್ಪಗಂಧಾಮೋದಿತ ಉತ್ಕೃಷ್ಟ ಕೇಶವರ್ಧಕ ತೈಲ. ಮೆದುಳಿನ ಸ್ವಾಸ್ಥ್ಯಕ್ಕೂ ನೇತ್ರಾರೋಗ್ಯರಕ್ಷಣೆಗೂ, ಕೇಶಕಲಾಪದ ಬೆಳವಣಿಗೆಗೂ, ಸೌಂದರ್ಯ ವರ್ಧನೆಗೂ ಸಹಾಯಕವಾಗಿದೆ. ಈ ತೈಲವನ್ನು ನಿತ್ಯವೂ ಉಪಯೋಗಿಸುತ್ತಿದ್ದರೆ, ಶಾರೀರಿಕ ಹಾಗೂ ಮಾನಸಿಕ ಶ್ರಮೆಯಿಂದ ಪುರುಷರಿಗೂ, ಪ್ರಸವಾನಂತರದಲ್ಲಿ ಸ್ತ್ರೀಯರಿಗೂ ಸಾಮಾನ್ಯವಾಗಿ ಕೇಶಮೂಲಗಳು ನಿಸ್ಸತ್ವ ಹೊಂದಿ ಕೂದಲುಗಳ ಉದುರುವಿಕೆ, ಅಕಾಲದಲ್ಲಿ ನರೆಯುಂಟಾಗುವಿಕೆ ಇವೇ ಮೊದಲಾದ ದೋಷಗಳು ದೂರವಾಗಿ ಕೇಶಮೂಲಗಳು ದೃಢವಾಗುವುದರಿಂದ ಅಚ್ಚಕಪ್ಪಾದ ಕೂದಲುಗಳು ನಿಬಿಡವಾಗಿ ಬೆಳೆಯುವುದಲ್ಲದೆ ಮೊದಲೇ ನರೆತ ಕೂದಲುಗಳು ಸಹ ಕಪ್ಪಾಗಿ ಮುಖಶ್ರೀಯು ಲಾವಣ್ಯಪೂರ್ಣವಾಗುವುದು. ತಲೆನೋವು, ಸೂರ್ಯವರ್ತ ಅಥವಾ ಅರೆತಲೆನೋವು, ನೇತ್ರಜ್ವಾಲೆ, ಮೆದುಳಿನ ಉಷ್ಣತೆ, ತಲೆತಿರುಕು, ದುಃಸ್ವಪ್ನಪೂರ್ಣವಾದ ನಿದ್ರಾಭಂಗ ಮೊದಲಾದ ವಾತ, ಪಿತ್ಥ, ಜನಿತ ಶಿರೋದೋಷಗಳೂ ನಿವೃತ್ತವಾಗಿ ಸುಖವಾದ ನಿದ್ರೆಯು ಹತ್ತುವುದು. ಇಂತಹ ಸುಖನಿದ್ರೆಯಿಂದ ಸ್ಮೃತಿ, ಮೇಧಾ, ಉತ್ಸಾಹ, ವಿಚಾರಶಕ್ತಿ ಮೊದಲಾದ ಮಾನಸಿಕ ಶಕ್ತಿಗಳು ವಿಕಾಸಹೊಂದಿ ಚಿರಾರೋಗ್ಯ ಲಾಭವಾಗುವುದು.

4 ಔನ್ಸಿನ ಸೀಸೆ ಒಂದರ 0—11—0.          2 ಔನ್ಸಿನ ಸೀಸೆ ಒಂದರ 0—6—0

**SWADESHI OUSHADI BHANDARA, KUNJAL,**

BRAMAVAR P. O., S. Kanara.

*Udipi Stockists :—*

SRI BHARATA VASTU MANDIRA

***BROTHERLY LOVE*** ***HOMELY FEELINGS***
***AND***
***ELDERLY INSTRUCTIONS***
**is what you find in**

# Shanthinikethana School, Kurady

(S. Kanara)

Hence the most suitable and the best place for the education of your youngsters. For particulars write to:

***MANAGER***
**SHANTHINIKETHANA, KURADY**
**BRAHMAVAR P. O.** (S. Kanara.)

# ಜಿಲ್ಲಾ ಸಂಚಾರಿಯ ಡೈರಿಯಿಂದ

### ಸದಸ್ಯರ ಭತ್ತೆ

ಕುಂದಾಪುರಕ್ಕೆ ಹೋಗಿದ್ದೆ. ದಾರಿಯಲ್ಲಿ ಜಿಲ್ಲಾ ಬೋರ್ಡು ಮೆಂಬರರೊಬ್ಬರು ಸಿಕ್ಕಿದರು. 'ನಮಸ್ಕಾರ ಸ್ವಾಮಿ, ಎಲ್ಲಿಗೆ ಹೋಗಿದ್ದಿರಿ?' 'ಇಲ್ಲೆ, ನಮ್ಮ ಪ್ರಯಾಣ ಭತ್ತೆ ಸಿಗುವುದಿತ್ತು.' 'ಓ, ಜಿಲ್ಲಾ ಬೋರ್ಡಿನಿಂದಲೇ?,' ಹೌದು' 'ಎಷ್ಟು ಸ್ವಾಮಿ,' ಎಂದೆ 'ಹೆಚ್ಚಿಲ್ಲ. ೩೬—೦—೦ ಪ್ರಯಾಣದ್ದು ೨—೦—೦ ಮಂಗಳೂರಲ್ಲಿ ಉಳಕೊಳ್ಳುವ ಭತ್ತೆ.'

ಕಾಂಗ್ರೆಸ್ ಪಕ್ಷದ ಮೆಂಬರರಿಗೂ ಇಷ್ಟು ಹಣವನ್ನು ತೆರಿಗೆದಾರರು ಕೊಡಬೇಕೇ? ಎಂದು ಭಾಸಿಸಿದೆ. ಎದೆ 'ಧಸಕ್ಕೆಂ'ದಿತು. ಇದರಲ್ಲಿ ನಾಲ್ಕೈದು ರೂಪಾಯಿಗಳಲ್ಲದೆ ಉಳಿದದ್ದೆಲ್ಲಾ ಲಾಭ. ಸರಿ. ಜಗತ್ತು ಲಾಭಹೊಂದುವುದಕ್ಕಾಗಿ ಸಾಯಲೂ ಸಿದ್ಧವಿರುವಾಗ ನಮ್ಮ ಬೋರ್ಡು ಮೆಂಬರರು ಅದನ್ನೇಕೆ ಬಿಡಬೇಕೆಂದು ಸಮಾಧಾನ ಹೊಂದಿದೆ.

ಏನಾದರೇನು? ತೆರಿಗೆದಾರರ ಹಣವನ್ನು ಅವರ ಪ್ರತಿನಿಧಿಗಳುಪಯೋಗಿಸದೆ ಮತ್ಯಾರು ಉಪಯೋಗಿಸುವುದು? ಹಣವು ಚಲಾವಣೆಗಾಗಿರುವುದಲ್ಲವೆ?

### ಮುನಿಸಿಪಲ್ ಚುನಾವಣೆ

ಉಡುಪಿ ಮುನ್ಸಿಪಾಲಿಟಿಯ ಚುನಾವಣೆಗೆ ನೋಮಿನೇಶನುಗಳನ್ನು ಸೆಪ್ಟೆಂಬರ ಗಳರಂದು ಸ್ವೀಕರಿಸುವರೆಂದೂ ಅಕ್ಟೋಬರ ೭ರಂದು ಚುನಾವಣೆಯೆಂದೂ ತಿಳಿದು ಬಂದಿದೆ. ಹಲವು ಮಂದಿ ಉತ್ಸಾಹೀ ಜನರು 'ಆಹಾ! ಕಾಂಗ್ರೆಸ್ ಚುನಾವಣೆಯಲ್ಲಿ ಭಾಗವಹಿಸುವುದಿಲ್ಲವಲ್ಲಾ' ಎಂದನ್ನುತ್ತಿದ್ದಾರೆ. ಕಾಂಗ್ರೆಸಿನ ಹೆಸರಿನಲ್ಲಾದರೂ ಸಲ್ಪ ಖರ್ಚು ಕಡಿಮೆಯಾಗುತ್ತಿತ್ತು! ಮಾಡುವುದೇನು?

### 'ವಾದ ಯುದ್ಧ'

ನಮ್ಮ ಜಿಲ್ಲಾ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷರಿಗೂ, ಜನರಲ್ ಕಾರ್ಯದರ್ಶಿಯರಿಗೂ ತಿಕ್ಕಾಟವುಂಟಾಗಿದೆಯೆಂಬುದು ಅವರ ಪತ್ರವ್ಯವಹಾರಗಳಿಂದ ಸ್ಪಷ್ಟವಾಗುತ್ತದೆ. ಶ್ರೀ. ಶೆಟ್ಟರು ಶಿಕ್ಷಣ ಸಮಿತಿಗೆ 'ನವಾಯತನ'ದ ಅಪ್ಪಣೆಯಿಲ್ಲದೆ ಸಿಂತರೆಂದು ಶ್ರೀ. ಮಲ್ಯರ ವಾದ. ಶ್ರೀ. ಮಲ್ಯರು 'ಸೂತ್ರಚಾಲನೆ' ನಡೆಸಿದರೆಂದು ಶ್ರೀ. ಶೆಟ್ಟರ ವಾದ. ಇದು 'ಅಗಾಧ ಅಜ್ಞಾನ'ವೆಂದು ಅಧ್ಯಕ್ಷರ ಹೇಳಿಕೆ. ಈ 'ನವಾಯತನ' ಯಾನೆ ಒಂಭತ್ತು ಸದಸ್ಯರ ಸಮಿತಿಯಲ್ಲಿ ಏನಾಗುತ್ತದೆಂದು ಕಮಿಟಿಯ ಪ್ರಧಾನ ಕಾರ್ಯದರ್ಶಿಯರಿಗೆ ಹೇಗೆ ತಿಳಿಯದಾಯಿತೊ? ಇದನ್ನು ನೋಡುವಾಗ 'ಸೂತ್ರಚಾಲನೆ'ಯ ಕುರಿತು ಶ್ರೀ. ಶೆಟ್ಟರು 'ಅಗಾಧ ಅಜ್ಞಾನ'ದಲ್ಲಿದ್ದಾರೆಂದು ಕಾಣಲೂ ಬಹುದು.

### ಕೇಂದ್ರವಿಧಾಯಕ ಸಭೆಗೆ

ನಮ್ಮ ಜಿಲ್ಲೆಯಿಂದ ವಿರೋಧವಿಲ್ಲದೆ ಶ್ರೀ. ಕೆ. ಬಿ. ಜಿನರಾಜ ಹೆಗ್ಡೆಯವರು ಆರಿಸಲ್ಪಟ್ಟು ಅವರು ಈಗ ಸಿಮ್ಲಾದ ಸಭಾಭವನದಲ್ಲಿದ್ದಾರೆನ್ನಿ. ಶ್ರೀ. ಸಾಮ್ಯುವೆಲ್ ಆರೂನರು ರಾಜೀಯಿತ್ತಾಗ ದೀರ್ಘನಿದ್ರೆಯಲ್ಲಿದ್ದ ನಮ್ಮ ಕಾಂಗ್ರೆಸ್ ಅಧಿಕಾರಿಗಳು ಈಗ ಎಚ್ಚರವಾಗಿರುವದು ನಿಜವಾಗಿಯೂ ಸಂತೋಷದ ಸಂಗತಿ. ಯಾವಾಗಲೂ ಕೇರಳಕ್ಕೆ ಸಿಗುತ್ತಿದ್ದ ಸದಸ್ಯತನವು ಈ ಬಾರಿ ದಕ್ಷಿಣ ಕನ್ನಡಕ್ಕೆ ಸಿಕ್ಕಿತು. ಕಾಂಗ್ರೆಸಿನವರೆಂದು ಯಾರೂ ಆರಿಸಲ್ಪಡದಿದ್ದರೂ ಶ್ರೀ. ಯಂ. ಎ. ನಾರಾಯಣ ಮೆನೊನರು ಕಾಂಗ್ರೆಸಿನವರ ಪರವಾಗಿದ್ದರೆಂದೂ, ಅವರಿಗೆ ಹೆಗ್ಡೆಯವರು ಅಡ್ಡಗಾಲಿಟ್ಟರೆಂದೂ ನಮ್ಮಧಿಕಾರಿಗಳ ದೂರು. ನಮ್ಮಧಿಕಾರಿಗಳಿಗೆ ಚುನಾವಣೆಯು ನೆನಪಾದುದು ಶ್ರೀ. ಹೆಗ್ಡೆಯವರ ಹೆಸರನ್ನು ಪತ್ರಿಕೆಗಳಲ್ಲಿ ನೋಡಿದ ಬಳಿಕ. ಇವರಿಗೆ ಎಚ್ಚರವಾಗುವಾಗ ಬಸ್ಸು ಹೋಗಿ ಬಿಟ್ಟಿತ್ತು. ಈಗ ಸಿಮ್ಲಾಕ್ಕೆ ತಲಪಿ ಶ್ರೀ. ಹೆಗ್ಡೆಯವರನ್ನು ಎಸೆಂಬ್ಲಿ ಭವನದಲ್ಲಿ ಬಿಟ್ಟರಬಹುದು. ಇದನ್ನು ನೋಡುವಾಗ ಮನೆಯು ಬೆಂಕಿ ಆರಿಸಲು ಆರು ತಿಂಗಳ ಬಳಿಕ ಹೋದ ಫಯರ್ ಬ್ರಿಗೇಡಿನ ನೆನಪಾಗುವುದಿಲ್ಲವೆ?




ಅವಸರವನ್ನು ಕುತ್ತಿಗೆಗೆ ಹಾಕಿಕೊಳ್ಳುತ್ತಾರೆಯೇ?

### ತುಸು ವಿನೋದ.

ಹೆಂಡತಿ:- ನೋಡಿ ಒಂದು ಬಾಟ್ಲಿ ಕೇಶವರ್ಧಿನಿ ತೈಲ.

ಗಂಡ:- ಒಳ್ಳೆದಾಯಿತು,ಮೋಹಿನಿ.

ಹೆಂಡತಿ:- ಹ್ಞಾ. ನೀವು ನಿಮ್ಮ ಹೊಸ ಸ್ನೇಹಿತೆ ಚಂದ್ರಾವಳಿಗೆ ಅದನ್ನು ಕೊಡಿರಿ. ನಿಮ್ಮ ಕೋಟಿನ ಮೇಲೆ ಯಾವಾಗಲೂ ಅವಳ ತಲೆ ಕೂದಲಿರುತ್ತದೆ.

# ಷೋಕೀ ಓಾಸ್ತ್ರನ ರ್ಘೋಕೀ ಪುರಾಣ

## ನೆಹೆರುಗಳ ಚಾಣಾಕ್ಷತೆ!

ಪಂಡಿತ ನೆಹರುಗಳು ಫ್ರೆಂಚ್ ಮಂತ್ರಿಗಳ ಮನಸ್ಸನ್ನು ಬದಲಾಯಿಸಿ ಬಿಟ್ಟದ್ದು ನೋಡುವಾಗ ಅವರು ''ಲೋಕದ ಜನತೆಯ ಧುರೀಣರಲ್ಲೊಬ್ಬರು'' ಎಂದು ಲಂಡನಿನ ಪ್ರಸಿದ್ಧ ಪ್ರಕಾಶಕರಾದ ಮಿ| ವಿಕ್ಟರ್ ಗೊಲ್ಲಾಂಝರು ಹೇಳಿರುವುದು ಸತ್ಯವೆಂದು ಕಾಣುತ್ತದೆ. ಫ್ರೆಂಚ್ ಇಂಡಿಯದಲ್ಲಿ ದಬ್ಬಾಳಿಕೆಯು ಹೆಚ್ಚಾಗಿದೆಯೆಂದು ಅವರು ಫ್ರಾನ್ಸಿನ ಮಂತ್ರಿಗಳೊಡನೆ ಹೇಳಿದ್ದೇ ತಡ, ಗವರ್ನರ್ ಬೋವಿನ್‌ರವರನ್ನು ಫ್ರೆಂಚ್ ಇಂಡಿಯದಿಂದ ಫ್ರಾನ್ಸಿಗೆ ಹಿಂದೆ ಕರೆದೇ ಬಿಟ್ಟರು. ನೆಹರುಗಳ ಚಾಣಾಕ್ಷತೆಯು ಜಯಿಸಿದಂತಾಯಿತು. ಆದರೆ ಇದೇ ಚಾಣಾಕ್ಷತೆಯು ಬ್ರಿಟಿಷ್ ಮಂತ್ರಿಗಳೊಡನೆ ನಡೆದಿದ್ದರೆ ಫೆಡರೇಶನಿನ ಕುರಿತು ನಾವು ಬೇರೆಯೇ ಒಂದು ಕತೆಯನ್ನೋದುತ್ತಿದ್ದೆವು. ಹಾಗಾಗಲಿಲ್ಲ ಎಂಬುದೊಂದೇ ಬೇಸರದ ಸಂಗತಿ. ಒಂದು ವೇಳೆ ಅವರ ಚಾಣಾಕ್ಷತೆಯ ಮುಕ್ಕಾಲುಪಾಲು ಇಂಗ್ಲೆಂಡಿನಲ್ಲಿ ನಡೆದಿದ್ದರೆ ಮಿ| ಮಹಮ್ಮದಾಲಿ ಜಿನ್ನರು ಸತ್ಯಾಗ್ರಹ ಮಾಡುತ್ತಿದ್ದರು!

o o o

## ಕ್ವೆಟ್ಟ ಭೂಕಂಪ!

ಕ್ವೆಟ್ಟದಲ್ಲಿ ಇನ್ನೂ ಭೂಕಂಪವಾಗುತ್ತಿದೆಯಲ್ಲಾ. ಅದನ್ನು ನಿಲ್ಲಿಸಲು ಇಂಡಿಯಾ ಸರಕಾರವು ಏನೂ ಮಾಡದಿರುವುದು ಆಶ್ಚರ್ಯವೆಂದು ಶ್ರೀ. ಲಾಲ್ ಚಂದ್ ನವಲ್‌ರಾಯರವರು ಕೇಂದ್ರ ವಿಧಾಯಕ ಸಭೆಯಲ್ಲಿ ಹೇಳಿದರು.

ಏನೂ ಆಶ್ಚರ್ಯವಿಲ್ಲ. ಇಂಡಿಯಾ ಸರಕಾರವು ವಜೀರಿಸ್ಥಾನದಲ್ಲಿ ಬಾಂಬೆಸೆಯುವುದರಲ್ಲಿ ನಿರತವಾಗಿರುವುದರಿಂದ ಭೂಕಂಪ ನಿಲ್ಲಿಸಲು ಪುರುಸೊತ್ತಾಗದಿರಬೇಕು.

o o o

## ಬಲಶಾಲಿಗಳಿಗೆ ಸಾಲ

ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಇತ್ತೀಚೆಗೆ ಸ್ವಾರಸ್ಯದ ಸಂಗತಿಯೊಂದು ನಡೆಯಿತು. ಸಮತಾವಾದಿಗಳೊಬ್ಬರ ಸರ್ವಾಧಿಕಾರಿಗಳಿಗೆ ಪುಷ್ಪ ಮಾಲೆಯನ್ನು ಹಾಕಿಬಿಟ್ಟರು. ಟರ್ಕಿಗೆ ಸಾಲಕೊಡುವ ಪ್ರಶ್ನೆಯು ತೀರ್ಮಾನವಾದೊಡನೆ ಚೀನಕ್ಕೂ ಹಾಗೆಯೇ ಸಾಲವನ್ನು ಕೊಡಬಹುದಲ್ಲಾ ಎಂದರೊಬ್ಬರು. ಚೀನಕ್ಕೂ ಟರ್ಕಿಗೂ ಇರುವ ಏಕಮಾತ್ರ ವ್ಯತ್ಯಾಸವೆಂದರೆ ಹಣದ ದೃಷ್ಟಿಯಲ್ಲಿ ಚೀನದ ಪರಿಸ್ಥಿತಿಯು ಒಳ್ಳೇದಿಲ್ಲದಿರುವುದು ಎಂದು ಲಾರ್ಡ್ ಸ್ಟೇನ್‌ಹಾಪರ ಉತ್ತರ. ಆದುದರಿಂದ ಟರ್ಕಿಗೆ ಸಾಲ, ಚೀನಕ್ಕೆ o! ಹಿಂದೆ ಸಿಕ್ಕುವ ಆಶೆಯಿದ್ದರಲ್ಲವೆ ಸಾಲಕೊಡುವುದು?

o o o

## ಅಹಿಂಸೆಯ ವಿಧಾನ!

ಕೆಲಸಗಾರರು ಫ್ಯಾಕ್ಟರಿಗಳ ಮುಂದೆ ನಿಂತು ಇತರರು ಒಳಗೆ ಪ್ರವೇಶಿಸದಂತೆ ತಡೆಯುವುದು ಹಿಂಸೆಯಲ್ಲದೆ ಮತ್ತೇನೂ ಅಲ್ಲ ಎಂದಿದ್ದಾರೆ ಮಹಾತ್ಮಾಜಿಯವರು. ಸರಿ. ಫ್ಯಾಕ್ಟರಿಗಳ ಮುಂದೆ ತಡೆಯುವವರು ಸಮತಾವಾದಿಗಳು! ಅಥವಾ ಅವರ ಅನುಯಾಯಿಗಳು. ಗಾಂಧಿ ತತ್ವಕ್ಕೂ ಇದಕ್ಕೂ ವ್ಯತ್ಯಾಸವಿರುವುದರಿಂದ ಅದು ಅಹಿಂಸೆಯಲ್ಲದೆ ಮತ್ತಾವುದೂ ಅಲ್ಲ!

o o o

## ಅಹಿಂಸಾತ್ಮಕ ಫ್ಯಾಸಿಸಮ್.

ಸಮತಾವಾದಕ್ಕೂ ಕಾಂಗ್ರೆಸಿಗೂ ಸರಿಬೀಳುವುದಿಲ್ಲವೆಂದು ಡಾ| ರಾಮಮನೋಹರ ಲೋಹಿಯರವರು ವಿದೇಶ ಖಾತೆಯ ಕಾರ್ಯದರ್ಶಿತ್ವಕ್ಕೂ, ಝಡ್. ಎ. ಅಹಮ್ಮದ್‌ರವರು ರಾಜಕೀಯ ಮತ್ತು ಅರ್ಥಿಕ ಖಾತೆಯ ಕಾರ್ಯದರ್ಶಿತ್ವಕ್ಕೂ ರಾಜಿನಾಮೆಯಿತ್ತಿದ್ದಾರಂತೆ.

ಹರಿಪುರದಲ್ಲಿ ಸರ್ದಾರ್ ಪಟೇಲರು 'ಸಮತಾವಾದಿಗಳಿಗೆ ಕಾಂಗ್ರೆಸಿಗೆ ವಿರೋಧವಾದ ಅಭಿಪ್ರಾಯವಿದ್ದರೆ ಅವರದನ್ನು ಬಿಟ್ಟು ಹೊರಗೆ ಹೋಗಬೇಕು.' ಎಂದಿದ್ದರಂತೆ. ಬಿಟ್ಟು ಬಿಡಲು ಇಷ್ಟು ಸಮಯ ಬೇಕಾಯಿತು.

ಪಟೇಲರ ವಿಧಾನಗಳಿಗೆ ಮುಂದೆ ಅಹಿಂಸಾತ್ಮಕ ಫ್ಯಾಸಿಸಮ್ ಎಂದು ಕರೆಯಲೂ ಬಹುದು!

o o o

## ''ಭಯಂಕರ ಕಮ್ಯೂನಿಸ್ಟರು!''

''ಕಮ್ಯೂನಿಸ್ಟರು ಭಯಂಕರ ಚಟುವಟಿಕೆಯವರು''ಎಂಬ ಸಾರಾಂಶದ ಮದ್ರಾಸ್ ಸರಕಾರದ ಪ್ರಕಟನೆಗೆ ಉತ್ತರವಾಗಿ ಮಿ| ಶಂಕರನ್ ನಂಬೂದರಿ ಪಾದರು 'ಹೀಗೆ ಹೇಳುವುದು ಕಾಂಗ್ರೆಸ್ ಸರಕಾರಕ್ಕೆ ಲಜ್ಜಾವಹ'ಎಂಬ ಸಾರಾಂಶದ ಉತ್ತರವಿತ್ತಿದ್ದಾರೆ. ಅವರ ಮೇಲಿರುವ ನಿಷೇಧವನ್ನು ತೆಗೆಯುವ ಬದಲು ಹೀಗೆ ಮಾಡುವುದೇ ಎಂದವರ ಕನಿಕರದ ದೂರು!

ರಾಜಾಜಿಯವರು ಸಮಾಧಾನಿಸಲು ಯಾವ ಕತೆಯನ್ನು ಹೇಳುವರೆಂದು ನಿರೀಕ್ಷಿಸಬೇಕಾಗಿದೆ!

o o o

ರೈಲ್ವೇ ಸ್ಪೀಡನ್ನು ಅಧಿಕಾರಿಗಳು ಹೆಚ್ಚಿಸಿದ ಕುರಿತು ಮಾತಾಡುತ್ತಾ ಶ್ರೀ. ಶ್ರೀಪ್ರಕಾಶರು 'ಮಿ| ರಾಬರ್ಟ್ಸನ್‌ರವರು ಹೆಚ್ಚಿಸಿದ ರೈಲ್ವೆಗಳ ವೇಗಕ್ಕಿಂತಲೂ ಹೆಚ್ಚು ವೇಗವಾಗಿ ಅವರು ನಮ್ಮ ದೇಶದಿಂದ ಓಡಿಬಿಟ್ಟಿದ್ದಾರೆ' ಎಂದು ಕೇಂದ್ರ ವಿಧಾಯಕ ಸಭೆಯಲ್ಲಿ ಹೇಳಿದರು.

ಅಪಘಾತವಾಗಿ ಜಖಮಾಗದಿರುವುದು ಸಂತೋಷದ ಸಂಗತಿ!

o o o

## ಬೆಳೆಯುವ ಘಟನೆ!

ಸಿಂಹಳದ ಘಟನೆಯಲ್ಲಿ ಸಮಾಧಾನ ಪಡದ ರಾಷ್ಟ್ರೀಯ ಕಾಂಗ್ರೆಸ್ ಡೆಪ್ಯುಟೇಶನಿನ ಸಭೆಯಲ್ಲಿ ಮಾತಾಡುತ್ತಾ ಇಂಗ್ಲೆಂಡಿನ ವಿರೋಧ ಪಕ್ಷದ ಸದಸ್ಯರಾದ ಮಿ| ಆಟ್ಲಿಯವರು: "ರಾಜ್ಯಾಂಗ ಘಟನೆಗಳು ಬೆಳೆಯಬೇಕಲ್ಲದೆ ಕೊಡಲ್ಪಡಬಾರದು" ಎಂದರು.

ಇದು ಸತ್ಯ ಸಂಗತಿಯಾದರೂ ಭಾರತೀಯರು ಸ್ವಂತ ಘಟನೆಯ ಸಸಿಯು ಬೆಳೆಯಲಾರಂಭವಾದೊಡನೆಯೇ ಅದನ್ನು ಕಸಿಮಾಡಿ ಈಗ ಅದಕ್ಕೆ ಇಂಗ್ಲೆಂಡಿನವರು ಬೆಳೆಸಿದ ಘಟನೆಯನ್ನು (ಫೆಡರೇಶನ್) ಜೋಡಿಸುತ್ತಿದ್ದಾರೆ. ಬ್ರಿಟಿಷರು ಬಹು ಚತುರ ಕಸಿ ಮಾಡುವವರಾಗಿರಬೇಕು!

೦೦೦

## ಹೊಸ ಕಾಯಿದೆ

ಮದ್ರಾಸ್ ಸರಕಾರವು ಹುಚ್ಚುತನದ ಕಾಯಿದೆಯಲ್ಲಿ ಕೆಲವು ತಿದ್ದುಪಡಿಗಳನ್ನು ಮಾಡುವುದಂತೆ.

ಪ್ರಾಯಶಃ ಹಿಂದೀ ವಿರೋಧ ಚಳವಳವನ್ನು ಕಂಡು ಇದರ ನೆನಪಾಗಿರಬೇಕು.

೦೦೦

## ಇನ್ನೊಂದು ರೂಪ

ಆಂಧ್ರ ದೇಶದ ಸರಕಾರೀ ಅಧಿಕಾರಿಗಳು ತಮ್ಮ ಸಂಬಳದಲ್ಲಿ ತಾವೇ ಕಡಿತಗಳನ್ನು ಮಾಡಿಕೊಳ್ಳಬೇಕೇಂದು ಬಿನ್ನವಿಸಿರುವರಂತೆ.

ನಿಮ್ಮೆದೆಗೆ ದಯವಿಟ್ಟು ಕತ್ತಿ ಹಾಕಿಕೊಳ್ಳಿ ಎಂಬುದು ಮೇಲಿನ ಬಿನ್ನಹದ ಮತ್ತೊಂದು ರೂಪವೆಂದು ಅಧಿಕಾರಿಗಳು ಭಾವಿಸಿರಬಹುದು.

೦೦೦

## ಮಾದರಿ ಮೈಸೂರಿನಲ್ಲಿ

ಮಾದರಿ ಮೈಸೂರು ಸಂಸ್ಥಾನದ ಮಾದರಿಯ ಕೆಲವು ದಾಖಲೆಗಳನ್ನು ಶ್ರೀ. ಕೆ. ಟಿ. ಭಾಷ್ಯಂರವರು ವಿದುರಾಶ್ವತ್ಥ ವಿಚಾರಣಾಕಾಲದಲ್ಲಿ ಹೇಳಿದರು:

ಶ್ರೀ. ರಾಜು: ಮೈಸೂರಿನ ಎಷ್ಟು ಗ್ರಾಮಗಳಲ್ಲಿ ಕುಡಿಯುವ ನೀರಿನ ಬಾವಿಗಳಿವೆ?

ಶ್ರೀ. ಭಾಷ್ಯಂ: ಸರಕಾರದ ಅಂಕೆ ಸಂಖ್ಯೆಗನುಸಾರವಾಗಿ ಸುಮಾರು ೫,೦೦೦ ಗ್ರಾಮಗಳಿಗೆ ಒಂದು ಕುಡಿಯುವ ನೀರಿನ ಬಾವಿಯೂ ಇಲ್ಲ.

ಮುಂದುವರಿಸುತ್ತಾ ಹೇಳಿದರು ಮಿ| ಭಾಷ್ಯಂರವರು: ಸಂಸ್ಥಾನದ ಸುಮಾರು ೮,೦೦೦ ಗ್ರಾಮಗಳಲ್ಲಿ ಪ್ರಾಥಮಿಕ ಶಾಲೆಗಳೇ ಇಲ್ಲ. ೧೧,೦೦೦ ಗ್ರಾಮಗಳಿಗೆ ಆಸ್ಪತ್ರೆಯೇ ಇಲ್ಲ.

ಗಣನೀಯ ದಾಖಲೆಗಳು!

೦೦೦

## ಸಾರ್ವಜನಿಕ ಅಭಿರುಚಿಯಲ್ಲಿ

ಗಡಿನಾಡಿನಲ್ಲಿ ಬಾಂಬೆಸೆತದ ಕುರಿತು ತಂದ ನಿಲುವಳಿ ಸೂಚನೆಗೆ ವೈಸರಾಯರು ಸಮ್ಮತಿಯೀಯಲಿಲ್ಲವಂತೆ.

ಒಳ್ಳೆದಾಯಿತು! ಭಾರತೀಯರ ಹಣದಿಂದ ಭಾರತೀಯರ ಮೇಲೆ ಬಾಂಬೆಸೆಯುವುದನ್ನು ಭಾರತೀಯರು ಖಂಡಿಸುವುದರಿಂದ 'ಸಾರ್ವಜನಿಕ'ರಿಗೆ ಹಾನಿಯಾಗುತ್ತದೆ. ವೈಸರಾಯರಿಗೆ ಜಯವಾಗಲಿ!

೦೦೦

## ಮೌಲಾನರ ಮಾತು!

"ಯುದ್ಧಕ್ಕಾಗಿ ಇಂಗ್ಲೆಂಡಿನ ಯುದ್ಧ ಸಚಿವರಾದ ಹೋರ್ ಬೆಲೀಷರಿಗೆ ಒಂದು ಪೈ ಕೊಡಾ ನಾನು ಕೊಡಲಾರೆ" ಎಂದು ಗಂಭೀರವಾಗಿ ಹೇಳಿದರು ಮೌಲಾನಾ ಶೌಕತಾಲಿಯವರು ಕೇಂದ್ರ ವಿಧಾಯಕ ಸಭೆಯಲ್ಲಿ.

ಆದರೆ ಪರದೇಶದ ಇನ್ಶೂರೆನ್ಸ್ ಸುಪರೆಂಟೆಂಡೆಂಟರ ನೇಮಕಕ್ಕೆ ವಿರೋಧವಾಗಿ ತಂದ ನಿಲುವಳಿ ಸೂಚನೆಯನ್ನು ವಿರೋಧಿಸಿ ಮೌಲಾನರು ಹೋರ್ ಬೆಲೀಷರ ಪಂಗಡದವರಿಗೆ ನೂರಾರು ರೂಪಾಯಿ ಕೊಟ್ಟುಬಿಟ್ಟರು.

೦೦೦

## ಬರಿದಾದ ಬೊಕ್ಕಸ

"ಬ್ರಿಟಿಷರ ದೇಶಪ್ರೇಮದ ಬೊಕ್ಕಸವು ಬರಿದಾಗಿದೆ. ಆದುದರಿಂದಲೇ ಬ್ರಿಟಿಷ್ ಸರಕಾರವು ಸೈನ್ಯಕ್ಕೆ ಕೊಡುವ ವೇತನವನ್ನು ಹೆಚ್ಚಿಸಿರುವುದು" ಎಂದು ಮಿ| ಆಸಾಫಾಲಿಯವರು ಢಿಲ್ಲಿ ಎಸೆಂಬ್ಲಿಯಲ್ಲಿ ಹೇಳಿದರು.

ಸರಿ ಸರಿ. ಭಾರತೀಯರ ದೇಶಪ್ರೇಮವು ಹೆಚ್ಚುತ್ತಿರುವುದರಿಂದ ಬ್ರಿಟಿಷ್ ಸರಕಾರವು ಭಾರತೀಯರಿಗಾಗಿ ಕಡಿಮೆ ಹಣ ಖರ್ಚುಮಾಡುವುದು. ಒಹೊ! ಗಟ್ಟು ರಟ್ಟಾಯಿತೀಗ.

೦೦೦

## ಸತ್ಯಾಗ್ರಹದ ಮಹಿಮೆ

ಅಬ್ಬಾ ಸತ್ಯಾಗ್ರಹದ ಮಹಿಮೆಯೆ? ಬರ್ಮದ ಪತ್ರಿಕೋದ್ಯಮಿಗಳ ಮೇಲಿರುವ ನಿಷೇಧವನ್ನು ತೆಗೆಯದಿದ್ದರೆ ಸತ್ಯಾಗ್ರಹ ಹೂಡುವರೆಂದು ಎಚ್ಚರ ಕೊಟ್ಟದ್ದೇ ತಡ ನಿಷೇಧವು ಹೋಗಿಯೇ ಬಿಟ್ಟಿತು. ಇವರೆಲ್ಲರೂ ಮಕ್ಕಳಿಂದ ಸತ್ಯಾಗ್ರಹವನ್ನು ಕಲಿತಿರಬೇಕು. ಅಮ್ಮ ಬೆಲ್ಲ ಕೊಡದಿದ್ದರೆ ಮಕ್ಕಳು ನೆಲದ ಮೇಲೆ ಹೊರಳಾಡಿ ನೆಲವನ್ನು ಪುಡಿ ಪುಡಿಮಾಡಿ ಬಿಡುತ್ತವೆ. ಚಿಕ್ಕಂದಿನ ಅಭ್ಯಾಸವು ಈಗ ಬಲವಾಗಿ ಸತ್ಯಾಗ್ರಹದ ರೂಪತಾಳಿರಬೇಕು.

೦೦೦

## ರಿಸರ್ವ್ ಬೇಂಕಿನಿಂದ ಪ್ರಯೋಜನ

ರಿಸರ್ವ್ ಬೇಂಕಿನ ವರದಿಯನ್ನು ಕಾಯುವುದರಿಂದ ಪ್ರಯೋಜನವಿಲ್ಲ. ತಿರುವಾಂಕೂರು ಬೇಂಕಿನ ಈಗ ನಡೆಯುತ್ತಿರುವ ವಿಚಾರಣೆಯನ್ನು ಮುಂದರಿಸುವದುತ್ತಮ' ವೆನ್ನುತ್ತಿದೆ ರಿಸರ್ವ್ ಬೇಂಕು ಮದ್ರಾಸ್ ಸರಕಾರಕ್ಕೆ ಬರೆದ ಪತ್ರ.

ಶೆಡ್ಯೂಲ್ಡ್ ಬೇಂಕುಗಳಿಗೆ ರಿಸರ್ವ್ ಬೇಂಕ್ ಮಾಡುವ ಉಪಕಾರದ ಒಂದು ಮಾದರಿಯಿದು!

೦೦೦

ಕೇಂದ್ರ ವಿಧಾಯಕ ಸಭೆಯಲ್ಲಿ ಸ್ವಾರಸ್ಯದ ಪ್ರಶ್ನೆಗಳು ಕೇಳಲ್ಪಡುತ್ತವೆ.

ಶ್ರೀ. ಐಯ್ಯಂಗಾರ್: ಬರ್ಮದ ಮುಸ್ಲಿಮರು ಆಕ್ಷೇಪಣಾರ್ಹವಾದ ಪುಸ್ತಕಕ್ಕೆ ಜವಾಬ್ದಾರರಾಗಿದ್ದರೆ ಭಾರತೀಯರು ಜಗಳದಲ್ಲೇಕೆ ಭಾಗವಹಿಸಬೇಕಿತ್ತು?

ಸರ್. ಜಿ. ಯಸ್. ವಾಜಪೇಯಿ: ಈ ಪ್ರಶ್ನೆಯನ್ನು ಜಗಳಮಾಡಿದವರೊಡನೆ ಕೇಳಬೇಕು! (ನಗೆ)

೦೦೦



# ಆಧುನಿಕ ಭಾರತದಲ್ಲಿ



## ಡಿಲ್ಲಿ ಎಸೆಂಬ್ಲಿಯಲ್ಲಿ ಸಂರಕ್ಷಣಾ ಖರ್ಚಿನ ಕುರಿತು ಚರ್ಚಿಸುವಾಗಲೇ ಯುದ್ಧವಾಯಿತು!

ಎಸೆಂಬ್ಲಿ ಭವನವು ಕಾಂಗ್ರೆಸ್ ಪಕ್ಷದ ಸದಸ್ಯರ ಮನೋಗತಿಯಿಂದ ಬಿಸಿಯಾಗಿಹೋಗಿ ಶೌಕತ್ತಾಲಿಗಳು ಕೂಡಾ ತಮ್ಮ ಗಡ್ಡವನ್ನು ಭರದಿಂದ ಸವರುವಂತಾಯಿತು! ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಯುದ್ಧ ಮಂತ್ರಿಗಳಾದ ಹೋರ್ ಬೆಲೀಷರು ಹೇಳಿದುದನ್ನು ಕೇಳಿ ಶ್ರೀ. ಸತ್ಯಮೂರ್ತಿಗಳು ಮೊದಲೇ ಕಂಗಾಲಾಗಿ 'ಏನಿದು—ಯುದ್ಧಕ್ಕಾಗಿ ೩೬೦,೦೦೦ ಪವನುಗಳ ಬದಲು ಬರುವ ವರುಷ ೬೦೦,೦೦೦ ಪವನುಗಳನ್ನು ಖರ್ಚು ಮಾಡುವರಂತೆ. ಸಾಮ್ರಾಜ್ಯಶಾಹಿಯ ಸೈನ್ಯಕ್ಕಾಗಿ ಇಷ್ಟು ಖರ್ಚೇ?' ಎಂದು ಪ್ರಶ್ನಿಸಿ ಬ್ರಿಟಿಷ್ ಸರಕಾರಕ್ಕೆ ಎಚ್ಚರವೀಯುತ್ತಾ—ಅವರು ಭಾರತೀಯರ ಎದೆಮೆಟ್ಟಿ ನಡೆದರೆ ಆಂಗ್ಲೋ—ಭಾರತ ಮೈತ್ರಿಯು ಬಿಡಕ್ಕೆ ಕೊಡಲಿ ಹಾಕಿದಂತಾಗುತ್ತದೆಂದರು. ಮೌಲಾನಾ ಶೌಕತಾಲಿಯವರು ಹೋರ್ ಬೆಲೀಷರಿಗೆ ಒಂದು ಪೈಯನ್ನೂ ಕೊಡಲಾರೆನೆಂದರು. ಮಿ. ಅಸಾಫಾಲಿಯವರು ಬ್ರಿಟಿಷ್ ಸೈನ್ಯದ ದೇಶ ಪ್ರೇಮವು ಬರಿದಾದುದರಿಂದ ಹಣ ಕೊಟ್ಟು ಅದನ್ನು ಕೊಂಡುಕೊಳ್ಳುತ್ತಿದ್ದಾರೆಂದು ಭರದಿಂದ ಮೇಜಿನ ಮೇಲೆ ಬಡಿದ ಪೆಟ್ಟಿಗೆ ಕಾಗದಗಳೆಲ್ಲ ಹಾರಿದಾಗ ಮಿ. ಜಿನ್ನರೆದ್ದು ನಿಂತು ಭಾರತಕ್ಕೆ ಬ್ರಿಟಿಷ್ ಸೈನ್ಯವು ಬೇಕಾಗಿಲ್ಲ. ಭಾರತೀಯ ಸೈನ್ಯವೇ ಸಾಕೆಂದು ಒಂದು 'ಫ್ರೈಂಟ್'ನ್ನು ಹೊರತಂದೊಡನೆಯೇ ಭೂಲಾಭಾಯಿ ದೇಸಾಯಿಯವರು ಮೆಲ್ಲನೆದ್ದು ನಿಂತು ನಮಗೆ ಬೇಕಾದ ಸ್ವರಾಜ್ಯದಲ್ಲಿ ನಮ್ಮ ಸೈನ್ಯವೇ ದೇಶದ



ವಾರ್ಧದಲ್ಲಿ ಗಾಂಧಿಜಿ ಮತ್ತು ಸರ್ದಾರರೊಡನೆ ಸಾಲನಿವಾರಣಾ ಮಸೂದೆಯ ಕುರಿತು ಚರ್ಚಿಸಿದ ಒರಿಸ್ಸಾದ ಪ್ರಧಾನರಾದ

**ಶ್ರೀ. ವಿಶ್ವನಾಥದಾಸರು.**

ಸಂರಕ್ಷಣೆ ಮಾಡಬೇಕೆಂದು ಹೇಳುವಾಗ ಎದ್ದರೇ ಎದ್ದರು ಶ್ರೀ. ಸತ್ಯಮೂರ್ತಿಗಳು ಇನ್ನೊಮ್ಮೆ! ಚರ್ಚೆಗೆ ಉತ್ತರವೀಯುತ್ತಾ-'ಯಾವಾಗಲೂ ನಮ್ಮೊಡನೆ ಯುದ್ಧಮಾಡುತ್ತಿದ್ದ ಸಂರಕ್ಷಣಾ ಖಾತೆಯ ಕಾರ್ಯದರ್ಶಿಯರಾದ ಮಿ. ಒಜಿಲ್ವಿಯವರು ಇವತ್ತು ಪಾರಿವಾಳದಂತೆ ಕೂಗುತ್ತಿದ್ದಾರೆ'ಂದು ಹೇಳಿ—ಬ್ರಿಟಿಷ್ ಸರಕಾರದವರು ನಮ್ಮನ್ನು **ಈ ರೀತಿ** ಕಂಡರೆ ನಾವು ಇಂಡಿಯಾ ಗವರ್ನಮೆಂಟನ್ನು ನಡೆಸುವುದಿಲ್ಲವೆಂದು ಹೇಳಬೇಕೆಂದು ಭಾರತೀಯ ಸದಸ್ಯರಿಗೆ ಬುದ್ಧಿ ಹೇಳಿದರು. ಭಾರತದ ಪಾರ್ಲಿಮೆಂಟರೀ ದಳಪತಿಗಳಾ ಶ್ರೀ. ಸತ್ಯಮೂರ್ತಿಗಳು ಮತಗಣನೆ ಮಾಡುವುದನ್ನು ಸೂಕ್ಷ್ಮವಾಗಿ ನೋಡಿ, ೬೧ ಅನುಕೂಲ, ೩೩ ಪ್ರತಿಕೂಲವೆಂದು ಹೇಳಿದೊಡನೆಯೇ ಭೂಲಾಬಾಯಿ ದೇಸಾಯಿಯವರ ಮುಖ ನೋಡಿ ನಕ್ಕುಬಿಟ್ಟರು. ಮಿ. ಆಸಾಫಾಲಿಯವರು ನಗಬಾರದೆಂದು ಎಷ್ಟು ಯತ್ನಿಸಿದರೂ ಕಿರುನಗೆಯೊಂದು ಹೊರಗೆ ಬಂತೇ ಬಂತು. ಮೌಲಾನಾ ಶೌಕತಾಲಿಯವರು ಪುನಃ ಗಡ್ಡವನ್ನು ಸವರುತ್ತಾ ಮಿ. ಜಿನ್ನರ ಮುಖ ನೋಡಿ ಬಿಳಿ ಕೂದಲುಗಳೆಡೆಯಿಂದ ಒಂದು ನಗೆತಂತಿಯನ್ನು ಕಳುಹಿಸಿಬಿಟ್ಟರು.

೦ ೦೦ ೦

### ಫಜ್ಲುಲ್ ಹಕ್ಕರ ಮೂರು ಹುಲಿಗಳು ಬದುಕಿಕೊಂಡುವು!

ಬಂಗಾಳ ಮಂತ್ರಿಮಂಡಲದ ಗೂಡಿನೊಳಗಿದ್ದ ಹತ್ತು ಹುಲಿಗಳಲ್ಲಿ ಮೂರು ಹುಲಿಗಳಿಗೆ ಕಾಂಗ್ರೆಸೇ ಮೊದಲಾದ ವಿರೋಧ ಪಕ್ಷದವರು ಅವಿಶ್ವಾಸ ಠರಾವಿನ ಗುಂಡುಗಳನ್ನೆಸೆದರೂ ತಾಗದೆ ಅವುಗಳು

ಉಳಿದುಕೊಂಡವು. ಇಷ್ಟಾಗುವಾಗ ಹಕ್ ಸಿಂಹವು ವಿಜಯ ಘರ್ಜನೆ ಮಾಡುವುದನ್ನು ಕೇಳಿ ವಿರೋಧಪಕ್ಷದವರು ತಮ್ಮ ಗುಂಡುಗಳು ಚೆನ್ನಾಗಿಲ್ಲವೆಂದು ತಿಳಿದು, ಸ್ವಲ್ಪ ನಂತರ ಶಿಕಾರಿ ಮಾಡಬಹುದೆಂದು ತಮ್ಮ ಕೋವಿಗಳನ್ನು ಹೆಗಲಮೇಲಿಟ್ಟುಕೊಂಡು ಗುಂಡುಗಳನ್ನು ಸುಧಾರಿಸುತ್ತಿದ್ದಾರೆ. ಮುಂದೆ ಮಾಡಬಹುದಾದ ಶಿಕಾರಿಯಲ್ಲಿ ಮಿಕ್ಕುಳಿದ ೭ ಹುಲಿ ಸಿಂಹಗಳ ಪಾಡು ಹೇಗಾಗಬಹುದೆಂದು ನೋಡಬೇಕಾಗಿದೆ.

o oo o

**ಮಧ್ಯಪ್ರಾಂತ್ಯದ ಶುಕ್ಲಪಕ್ಷ!**

ಮಧ್ಯಪ್ರಾಂತ್ಯದ ವಿಷಾದಾಂತ ನಾಟಕದಲ್ಲಿ ರಾಜ ಪಾತ್ರವನ್ನು ವಹಿಸಿದ ಡಾ. ಖರೆಯವರು ತಮ್ಮ ಪ್ರಾಂತ್ಯದಲ್ಲಿ ಮುಂದೆ ಎರಡೇ ಪಕ್ಷಗಳಿರಬೇಕೆಂದೂ ಅವುಗಳಲ್ಲಿ ಒಂದು ಶುಕ್ಲಪಕ್ಷ, ಮತ್ತೊಂದು ಕೃಷ್ಣಪಕ್ಷವಲ್ಲ- ಖರೆ ಪಕ್ಷವೆಂದು ಕರೆಯಲ್ಪಡಬೇಕೆಂದೂ ಹೇಳುವುದರಲ್ಲಿದ್ದಾರೆ. ಈ ಪಕ್ಷಗಳ ಘರ್ಷಣೆಯಿಂದಾಗಿ ನಾಗಪುರದಲ್ಲಿ ನಡೆದ ಸಭೆಯಲ್ಲಿ ಹಲವು ವಿದ್ಯಾರ್ಥಿಗಳ ತಲೆಗಳು ಪುಡಿಯಾದುವು. (ಇನ್ಸ್ಯೂರ್ ಮಾಡದಿದ್ದುದರಿಂದ ಪುಡಿಯಾದರೂ ನಿಷ್ಪ್ರಯೋಜನವಾಯಿತೆಂದು ಇನ್ಸ್ಯೂರ್ ಕಂಪೆನಿಯವರೊಬ್ಬರು ಹೇಳಿರುವರೆಂಬು ಸುದ್ದಿ ಬಂದಿದೆ.) ಒಂದೆಡೆಯಲ್ಲಿ ಹೀಗಾಗುವಾಗ ಇನ್ನೊಂದೆಡೆಯಲ್ಲಿ ಕಾಂಗ್ರೆಸಿನ ಜನರಲ್ ಸೆಕ್ರೆಟರಿ ಕೃಪಾಲನಿಯವರು ಪ್ರಜಾಸತ್ತಾತ್ಮಕ ದೃಷ್ಟಿಯಿಂದ ಇಡೀ ನಾಟಕವನ್ನು ವಿಮರ್ಶಿಸಿ ಕಾಂಗ್ರೆಸ್ ವರ್ಕಿಂಗ್ ಕಮಿಟಿಯು ಮಾಡಿದ ನಿರ್ಣಯವು ಸರಿಯೆಂದು ಮೊದಲೇ ನಿರೀಕ್ಷಿಸಲ್ಪಟ್ಟಂತೆ ಹೇಳಿ, ತನ್ನ ದೀರ್ಘ ಪ್ರಕಟಣೆಯನ್ನು ಪ್ರಕಟಿಸಿದ್ದಾರೆ. ಗಾಂಧಿಜಿಯವರಂತೂ ಸುಮ್ಮನೆ ಕೂತುಕೊಳ್ಳಲಿಲ್ಲ. ಫ್ಯಾಸಿಸ್ಟ್ ತತ್ವವು ಭಾರತದಲ್ಲಿದ್ದರೆ ಖರೆಯವರ ತಲೆಯೇ ಹೋಗುತ್ತಿತ್ತೆಂದು ಹೇಳಿದರೂ ಖರೆಯವರು ತಲೆ ಹೋದರೂ ಚಿಂತೆಯಿದ್ದಿಲ್ಲ, ಈಗ ಆತ್ಮನಾಶವಾಯಿತಲ್ಲಾ ಎಂದು ಉತ್ತರ ಕೊಟ್ಟಿದ್ದಾರೆ. ಸರ್ದಾರ್



ಮುಂಬಾಯಿಯ ಪ್ರಧಾನ ಮಂತ್ರಿಗಳಾದ
**ಶ್ರೀ. ಬಿ. ಜಿ. ಖೇರ್.**

ಪಟೇಲರಿಗೂ ಖರೆಯವರಿಗೂ ಅದೇಕೋ ಸರಿಬೀಳುವುದೇ ಇಲ್ಲ. ಶುಕ್ಲಪಕ್ಷದ ಬೆಳ್ದಿಂಗಳಿಗೆ ಖರೆ ಪಕ್ಷವು ಉಪದ್ರವಿಸಬಹುದೆಂದು ಭಾವಿಸಿ,ಅಲ್ಲಿಯ ಹೊಸ ‘ಕಾಂಗ್ರೆಸ್ ವರ್ಕಿಂಗ್ ಕಮಿಟಿ ಮಂತ್ರಿಮಂಡಲವು’ ಅಗಾಗ ಸರ್ದಾರರ ‘ಫರ್ಮಾನ’ನ್ನು ಪಡೆಯುತ್ತಲಿದೆ. ಪ್ರಾಯಶಃ ಖರೆಯವರ ಭವಿಷ್ಯವು ಒಂದೋ ನರಿಮನರಂತಾಗಬಹುದು ಅಥವಾ ಅವರು ಕಾಂಗ್ರೆಸಿನಿಂದ ಹೊರಗೆ—ಬಹುದು ಎಂಬ ತಿದೆ ಈಗ ನಡೆಯುತ್ತಿರುವ ವಾದದ ಸರಣಿ.

**ಪ್ರಾಂತಿಕ ಸರಕಾರಗಳು.**

ನವರಾಜ್ಯ ಘಟನೆಯ ಮೇರೆಗಳನ್ನು ವಿಸ್ತರಿಸಿ ಆದಷ್ಟು ಜನೋಪಕಾರ ಮಾಡುವುದಕ್ಕಾಗಿ ಹೋರಾಡುತ್ತಿವೆ. ಮದರಾಸಿನಲ್ಲಿ ಹಿಂದೀ ವಿರೋಧ ಚಳವಳದ ಎಮ್ಮೆಯು ಕಾಲನ್ನು ಕುಂಟುತ್ತಾ ಮುನ್ನಡೆಯುತ್ತಿರುವಾಗ ಆಂಧ್ರ ಪ್ರಾಂತ್ಯ ನಿರ್ಮಾಣ ಚಳವಳದ ಸಿಂಹವು ಘರ್ಜಿಸುತ್ತಾ ಶ್ರೀ. ರಾಜಗೋಪಾಲಾಚಾರ್ಯರ ನಿದ್ದೆಯನ್ನು ಕೆಡಿಸುತ್ತಿದೆ. ಮುಂಬಯಿಯಲ್ಲಿ ಮಂತ್ರಿಮಂಡಲವು ಪಾನನಿರೋಧ ಮಸೂದೆಯನ್ನು ಅಹಮ್ಮದಾಬಾದ್ ಮೊದಲಾದೆಡೆಗಳಲ್ಲಿ ಜಾರಿಗೆ ತಂದುದಲ್ಲದೆ ಅದರ ಯಶಸ್ಸು ಎಚ್ಚೆತ್ತು ಕಾಣುತ್ತಿರುವಾಗ ಮುಂಬಯಿಯ ಹರಿಜನ ವಿರೋಧೀ ಹೊಟೆಲು ಮ್ಹಾಲಕರು ತಮ್ಮ ಜಾತಿಯ ಪಾವಿತ್ರ್ಯಕ್ಕೆ ಕೊಡಲಿಯಾಗುತ್ತದಲ್ಲಾ ಎಂದು ಮುಮ್ಮಲ ಮರುಗಿ ಸತ್ಯಾಗ್ರಹ ಮಾಡುವುದೊಂದೇ ಬಾಕಿ ಎನ್ನುವುದರಲ್ಲಿದ್ದಾರೆ. ಒರಿಸ್ಸದ ಪ್ರಧಾನರಾದ ಶ್ರೀ. ವಿಶ್ವನಾಥದಾಸರು ವಾರ್ಧಕ್ಕೆ ಹೋಗಿ ತಮ್ಮ ಪ್ರಾಂತ್ಯದಲ್ಲಿ ಜಾರಿಗೆ ಬಂದ ಒಕ್ಕಲುತನ ಮಸೂದೆಯ ಕುರಿತು ಮುಕುಟರಹಿತ ರಾಜರಾದ ಗಾಂಧಿಜಿಯವರ ಆಶೀರ್ವಾದವನ್ನು ಪಡೆದು ಕಾಂಗ್ರೆಸಿನ ಪ್ರಧಾನ ದಳಪತಿ ಸರ್ದಾರ್ ಪಟೇಲರೊಡನೆ ಚರ್ಚಿಸಿ, ವರ್ಕಿಂಗ್ ಕಮಿಟಿಯು ಮಂತ್ರಿಮಂಡಲಗಳಿಗೆ ‘ಶಕ್ತಿ ಸ್ಫೂರ್ತಿ’

(೩೦ನೇ ಪುಟಕ್ಕೆ ಮುಂಬರಿದಿದೆ.)

# ಅಂತರಂಗ

ಉಡುಪಿ, ಆದಿತ್ಯವಾರ, ಅಗೋಸ್ತು ೨೧, ೧೯೩೮

## ಮಡದಿಯರ ಮುಷ್ಕರ

ಭಾರತವು ತನ್ನ ದಾಸ್ಯವನ್ನು ಕಿತ್ತೊಗೆಯಲು ಯತ್ನಿಸುತ್ತಿರುವಾಗ ಸಿಂಧ ಪ್ರಾಂತ್ಯದ ಮಡದಿಯರು ತಮ್ಮ ಗಂಡಂದಿರಿಂದ ಪಾರಾಗಿ ಸ್ವತಂತ್ರ ಜೀವನವನ್ನು ನಡೆಸಲು ಹೊಸತೊಂದು ಉಪಾಯವನ್ನು ಕಂಡುಹಿಡಿದಿದ್ದಾರೆ. ಅಲ್ಲಿಯ ಸ್ತ್ರೀಯರನ್ನು ‘‘ಓಂ ಮಂಡಲಿ”ಯೆಂಬೊಂದು ಸಂಸ್ಥೆಯ ವಿದ್ಯುಚ್ಛಕ್ತಿಯಂತಹ ಪ್ರಭಾವವು ತಮ್ಮ ಪ್ರಿಯ ಪತಿಯರನ್ನು ಅಗಲುವಂತೆ ಮಾಡಿದೆ. ಈ ನೂತನ ಚಳವಳವು ಸಿಂಧ ಪ್ರಾಂತ್ಯದ ಗಂಡಂದಿರ ಎದೆಯನ್ನೊಡೆಯುತ್ತಿದೆ. ಸಾವಿರ ಗಟ್ಟಲೆ ದಂಪತಿಗಳೊಳಗಿದ್ದ ಪ್ರೇಮ ಬಂಧನದ ನೇಣನ್ನು ಕಡಿಯುತ್ತಿದೆ. ಈ ಸ್ವಾರಸ್ಯಮಯ ಚಳವಳದ ಕತೆಯು ಹೀಗಿದೆ:—ಕಳೆದ ಜೂನ್ ತಿಂಗಳ ಆದೊಂದು ಸುಪ್ರಭಾತದಲ್ಲಿ ಸಿಂಧ ಪ್ರಾಂತ್ಯದ ಹೈದರಾಬಾದಿನ ಮಡದಿಯರು ಅನಿರೀಕ್ಷಿತವಾಗಿ ‘‘ಓಂ ಮಂಡಲಿ’’ಯೆಂಬುದರ ಸದಸ್ಯರಾಗಿ, ತಮ್ಮ ಗಂಡಂದಿರೊಡನೆ ಕನಿಕರವಿಲ್ಲದೆ ‘‘ನಾವಿನ್ನು ಸ್ವತಂತ್ರರು. ನಮಗಿಚ್ಛೆಯಿದ್ದರೆ ಪುನರ್ವಿವಾಹವಾಗಬಹುದು’’ ಎಂದು ಹೇಳಿ ಮುಷ್ಕರವಾರಂಭಿಸಿದರು. ಗತಿಗಾಣದ ಗಂಡಂದಿರು ತಮ್ಮ ಮಡದಿಯರು ಹಾಗೆ ಮಾಡಬಾರದೆಂದು ಕಾಡಿ ಬೇಡಿದರು. ಆದರೆ ಅವರ ಯತ್ನವು ಸಫಲವಾಗಲಿಲ್ಲ. ‘‘ಓಂ ಮಂಡಲಿ’’ಯವರು ಅವರ ಸಂಘದ ಮಹತ್ವಿಕೆಯನ್ನು ಹೇಳುತ್ತಾ ಅದಕ್ಕೆ ಸೇರುವವರು ದೇವ-ದೇವತೆಯರಾಗುವರೆಂದರು. ಅಂದು ಪ್ರಾರಂಭವಾದ ಮುಷ್ಕರವು ಇಷ್ಟರ ತನಕವೂ ನಿಲ್ಲಲಿಲ್ಲ. ಹೈದರಾಬಾದಿನ ಹಿಂದುಗಳು ಒಟ್ಟು ಸೇರಿ ೧೮ ಮಂದಿಯನ್ನೊಳಗೊಂಡ ‘‘ಹಿಂದು ಪಂಚಾಯತ್’’ ಎಂಬುದನ್ನು ಸ್ಥಾಪಿಸಿ, ಮಡದಿಯರು ‘‘ಓಂ ಮಂಡಲಿ’’ಗೆ ಪ್ರವೇಶಿಸದಂತೆ ಪಿಕೆಟಿಂಗ್ ಮಾಡುತ್ತಿದ್ದಾರೆ. ‘‘ಅಮ್ಮಾ ರಕ್ಷಿಸಿರಿ” ‘‘ಹಾಗೆ ಮಾಡಬೇಡಿ!” ‘‘ನೀವು ನಿಮ್ಮ ಗಂಡಂದಿರ ಮುದ್ದು ಮಡದಿಯರಲ್ಲವೆ?” ಎಂಬೀ ಕರುಣಾಜನಕ ಮೊರೆಗಳು ಪ್ರತಿದಿನ ಸಾಯಂಕಾಲ ೫|| ತಾಸಿಗೆ ಮಂಡಲಿಯ ಪ್ರವೇಶ ದ್ವಾರದ ಬಳಿಯಲ್ಲಿ ಕೇಳಲ್ಪಡುತ್ತವೆ. ೬ ತಾಸಿಗೆ ಸತ್ಸಂಗವು ಮಂಡಲಿಯಲ್ಲಿ ಪ್ರಾರಂಭವಾಗುತ್ತದೆ. ಗಂಡಸರು ಅದೆಷ್ಟು ಮೊರೆಯಿಟ್ಟರೂ ಲೆಕ್ಕಿಸದೆ ಸ್ತ್ರೀಯರು ಕಲ್ಲೆದೆಯವರೆಂದು ವ್ಯಕ್ತಪಡಿಸಿದ್ದಾರೆ. ಎಷ್ಟು ಬೇಡಿದರೂ ಅವರದೊಂದೇ ಹಾಡು. ‘‘ಭಾಯಿ ಲೇಖರಾಜರು ಸಾಕ್ಷಾತ್ ಶ್ರೀಕೃಷ್ಣನ ಅವತಾರ ವ್ಯಕ್ತಿಯಾಗಿದ್ದಾರೆ. ನಾವು ಅವರ ಗೋಪಿಕಾ ಸ್ತ್ರೀಯರು. ನಮ್ಮ ಕೃಷ್ಣನಿಂದ ನಾವು ದೂರವಿರುವುದಾದರೂ ಹೇಗೆ?” ಎಂಟು ದಿನಗಳಾದುವು! ಪಿಕೆಟಿಂಗ್ ನಡೆಯುತ್ತಿದೆ. ಓಂ ಮಂಡಲಿಯ ಸ್ಥಾಪಕರೇ ಕರಾಚಿಯಲ್ಲಿದ್ದುಕೊಂಡು ಗಂಡಂದಿರಿಗೆಲ್ಲಾ ಬುದ್ಧಿ ಕಲಿಸುವುದರಲ್ಲಿದ್ದಾರೆ. ಪ್ರಾಯಶಃ ಸಿಂಧ ಪ್ರಾಂತ್ಯದ ಗಂಡಂದಿರು ಒಂದು ಸಂಘವನ್ನು ಸ್ಥಾಪಿಸಿ, ‘‘ಓಂ ಮಂಡಲಿ”ಯನ್ನು ಕಾಯಿದೇ ಬಾಹಿರವೆಂದು ಮಾಡಲು ಯತ್ನಗಳನ್ನು ಮಾಡಬಹುದು. ಈ ಚಳವಳವು ನಿಜವಾಗಿಯೂ ಪತ್ರಿಕೆಗಳೆನ್ನುವಷ್ಟು ಭಯಂಕರವಾಗಿದ್ದಲ್ಲಿ ಸರಕಾರವು ಇದರ ವಿರುದ್ಧವಾಗಿ ತಕ್ಕ ಶಾಸನವನ್ನು ಮಾಡುವ ಅವಶ್ಯಕತೆಯೂ ಬಂದೊದಗಬಹುದು!

---



ಬಡ ಭಾರತೀಯ
ಫೆಡರಲ್ ಯೋ
ಯಲ್ಲಿ ಯುದ್ಧವ
ಯೋಗಿಸುವ ಸ್ಕೈ

---

ಮೂಜಗದ ಬಂಧನವ
ಬಂದಿಗಳ ಬಸಿರಲ್ಲಿ
ರಾಜರಾಜರ ಬೆರಳ ಸ
ತಲೆಮರೆಸಿ ಬಳೆದ
ಲೋಕಕ್ಕೆ ಬೆಳಕಿತ್ತ
ನಿನಗೆ ನೂರಾರು

## ವೊ, ದಮನವೊ?




ಲ್ಲ. ಒಂದೆಡೆಯಿಂದ ಭಾರತವನ್ನು ಸ್ವರ್ಗಲೋಕಕ್ಕೊಯ್ಯುವ ಪ್ರಧಾನರಾದ ಚೇಂಬರ್ಲೇನರು ಕೊಡುತ್ತಿದ್ದಾರೆ. ಇನ್ನೊಂದೆಡೆ ರು ಪ್ರತಿ ವರುಷ ೪೫ ಕೋಟಿಗಿಂತಲೂ ಹೆಚ್ಚು ಹಣವನ್ನು ಪ . ಈ ದಾನಗಳು ಭಾರತಕ್ಕೆ ಒಗ್ಗದೆ ದಮನಗಳಾಗಿ ಪರಿಣಮಿಸಿವೆ!

### ಶ್ರೀಕೃಷ್ಣನಿಗೆ

ಭಾರತದ ರುದ್ರನಾಟಕದ ನಾಯಕ ನೀನು
ಆಯುಧವ ಕೆಳಗಿಟ್ಟು ಸಾರಥ್ಯವೆಸಗಿದವ.
ನೀನು ವಿಶ್ವದ ರಾಜಕಾರಣಿಗಳಾಚಾರ್ಯ,
ಅಣುಮಹತ್ತುಗಳೊಳಿತು ಕೆಡುಕುಗಳ, ಸುಖದುಃಖ
ಭಾವಗಳ, ಮಾನವ್ಯ- ದೈವಿಕಾಸುರಿ ತತ್ವ-
ಗಳ ಸಮಾವೇಶ, ಅಜ್ಞೇಯ ಓ ವಿಶ್ವರೂಪ!

## ಎಸೆಂಬ್ಲಿಯಲ್ಲಿ ಭಾಷೆಗಳ ಗೊಂದಲ

ಮದ್ರಾಸ್ ಎಸೆಂಬ್ಲಿಯಲ್ಲಿ ಭಾಷೆಯ ಕುರಿತು ಸ್ವಾರಸ್ಯದ ಚರ್ಚೆಯು ನಡೆಯಿತು. ಪಾರ್ಲಿಮೆಂಟರಿ ಸೆಕ್ರೆಟರಿಯರೊಬ್ಬರು ಒಂದು ಪ್ರಶ್ನೆಗೆ ತಮಿಳು ಭಾಷೆಯಲ್ಲಿ ಉತ್ತರ ಕೊಟ್ಟಾಗ ಶ್ರೀ. ಕೆ. ಆರ್. ಕಾರಂತರು ಅವರು ಹೇಳಿದುದೇನೆಂದು ಅರ್ಥವಾಗುವುದಿಲ್ಲವೆಂದರು. ಕೂಡಲೆ ಇಂಗ್ಲಿಷ್ ಭಾಷಾಂತರವನ್ನು ಅವರು ಮಾಡಬೇಕಾಯಿತು. ಇನ್ನೊಂದು ಪ್ರಶ್ನೆಯು ತಮಿಳಿನಲ್ಲಿಯೇ ಕೇಳಲ್ಪಟ್ಟಾಗ ಸೆಕ್ರೆಟರಿಯರು ಸ್ಪೀಕರರೊಡನೆ ಪ್ರತಿಯೊಂದು ಪ್ರಶ್ನೆಯನ್ನೂ ಭಾಷಾಂತರಿಸಬೇಕೇ ಎಂದು ಕೇಳಿದರು.

ಇಷ್ಟಾದುದೇ ತಡ ಮಿ| ಮಹ್ಬೂಬ್ ಆಲಿ ಬೇಗ್‌ರವರು ಹಿಂದುಸ್ಥಾನಿಯಲ್ಲಿ ಒಂದು ಪ್ರಶ್ನೆಯನ್ನು ಕೇಳಿದಾಗ "ನನಗೆ ಅರ್ಥವಾಗಲಿಲ್ಲ"ವೆಂದು ಮರುಕು ಹಿಂದುಸ್ಥಾನಿಯಲ್ಲಿ ಸೆಕ್ರೆಟರಿಯವರು ಹೇಳಿದರು. ಸ್ವಲ್ಪ ಚರ್ಚೆಯಾದೊಡನೆಯೇ ಕೇರಳದ ಮಿ| ಕಣ್ಣನ್‌ರವರು ಎದ್ದು ಮಲೆಯಾಳದಲ್ಲಿ ಒಂದು ಪ್ರಶ್ನೆ ಕೇಳಿದಾಗ ಸೆಕ್ರೆಟರಿಯವರದು ಕೂಡಲೆ ಉತ್ತರ ಬಂತು, "ನನ್ನಿಂದ ಉತ್ತರ ಸಿಗಲಿಕ್ಕಿಲ್ಲ" ಸ್ಪೀಕರರು ಇದಕ್ಕೆ ಬೇರೆಯೇ ಅರ್ಥ ಮಾಡಿ "ಆ ಪ್ರಶ್ನೆಯೋಗ್ಯವಾದುದು" ಎಂದರು. ಆಗ ಸೆಕ್ರೆಟರಿಯರು "ಪ್ರಶ್ನೆ ಯೋಗ್ಯವಾದದ್ದು ಸರಿ. ಆದರೆ ನನಗೆ ಮಲೆಯಾಳ ತಿಳಿಯುವುದಿಲ್ಲವಲ್ಲಾ" ಎಂದರು.

ತುಳು ಮತ್ತು ಕನ್ನಡದಲ್ಲಿ ಪ್ರಶ್ನೆಗಳು ಕೇಳಲ್ಪಟ್ಟಿದ್ದರೆ ಗೊಂದಲವು ಇನ್ನಷ್ಟು ಹೆಚ್ಚಾಗುತ್ತಿತ್ತು.

# ವಿಶ್ವವಿಚಾರ

## ಜರ್ಮನಿಯ ಪ್ರದರ್ಶನ

ಯುರೋಪನ್ನು ಯಾವ ವಿಧಾನಗಳಿಂದ ಹೆದರಿಸಬೇಕೆಂಬ ಕಲೆಯ ಅರಿವು ಹಿಟ್ಲರನಿಗೆ ಸಂಪೂರ್ಣವಾಗಿದೆ. ಜೆಕೊಸ್ಲೊವೇಕಿಯದ ಸರಕಾರವು ರಾಜಿಯಿಂದ ಸುಡೆಟನ್ ಜರ್ಮನರನ್ನು ಸಂತಯಿಸುತ್ತಿರುವಾಗ ಒಂದು ಸುಪ್ರಭಾತದಲ್ಲಿ ಅವರನ್ನು ಬೆದರಿಸಿ ಆ ರಾಷ್ಟ್ರದ ಒಂದಂಶವನ್ನಾದರೂ ಪಡೆಯುವ ಅಭಿಲಾಷೆಯಿಂದ ಹಿಟ್ಲರನು ರೈನ್‌ಲೇಂಡ್ ಮೊದಲಾದಕಡೆಗಳಲ್ಲಿ ಯುದ್ಧಸಿದ್ಧತೆಗಳನ್ನು ಅತ್ಯಂತ ಭರದಿಂದ ಸಾಗಿಸುವುದಲ್ಲದೆ ಸುಮಾರು ೩,೦೦,೦೦೦ ಕೆಲಸಗಾರರನ್ನು ಒತ್ತಾಯಪೂರ್ವಕವಾಗಿ ಸೈನ್ಯಕ್ಕೆ ಸೇರಿಸಿಕೊಂಡು, ಯುರೋಪನ್ನು ಬೆದರಿಸಿದ್ದಾನೆ. ಆಸ್ಟ್ರಿಯಕ್ಕೆ ಬೆದರಿಕೆಯನ್ನಿತ್ತಂತೆಯೇ ಈ ಬಾರಿ ಜೆಕೊಸ್ಲೊವೇಕಿಯದ ಮೇಲೆ ಧಾಳಿ ನಡೆಸುವಾಗ ಇತರ ರಾಷ್ಟ್ರಗಳು ಸುಮ್ಮನಾಗಿರಲೆಂಬುದೇ ಹಿಟ್ಲರನ ಬೆದರಿಕೆಯ ರಹಸ್ಯವಾಗಿದೆ.

೦೦೦

## ಸೋವಿಯೆಟ್–ಜಪಾನ್ ಯುದ್ಧಕ್ಕೆ ವಿಶ್ರಾಂತಿ

ತತ್ಕಾಲಕ್ಕೆ ಚಾಂಗ್ ಕು ಫೆಂಗ್ ಪ್ರದೇಶದಲ್ಲಿ ಜಪಾನ್ ರಷ್ಯಗಳೊಳಗೆ ನಡೆಯುತ್ತಿದ್ದ ಯುದ್ಧವು ಕೊನೆಗೊಂಡಿತು. ರಷ್ಯ ಮತ್ತು ಚೀನಗಳೊಂದಿಗೆ ಯುದ್ಧ ಮಾಡುವುದರಿಂದ ಜಪಾನಿನ ಶಕ್ತಿ ಕುಂದುವುದೆಂಬುದನ್ನು ತಿಳಿದು ಜಪಾನು ಹೇಗಾದರೂ ರಷ್ಯದೊಡನೆ ರಾಜಿ ಮಾಡಿಕೊಂಡಿತು. ಚರ್ಚಿಯ ಸ್ಥಳವು ಈಗ ರಷ್ಯನರ ಕೈಯ್ಯಲ್ಲಿದೆ. ಇತ್ತಂಡದವರೂ ತಮ್ಮ ಸೈನ್ಯವನ್ನು ಆ ಪ್ರದೇಶದಿಂದ ಹೊರಗೆ ಕರೆಸಿಕೊಂಡಿದ್ದಾರೆ. ಈ ಯುದ್ಧವು ನಡೆಯುತ್ತಿದ್ದರೆ ಜರ್ಮನಿಯು ಜಪಾನಿನೊಡನೆ ಮಾಡಿದ ತನ್ನ ಒಪ್ಪಂದದಿಂದಾಗಿ ರಷ್ಯದೊಡನೆ ಯುದ್ಧ ಮಾಡಿ ಫ್ರಾನ್ಸನ್ನು ಕೂಡಾ ಯುದ್ಧರಂಗಕ್ಕೆಳೆಯುತ್ತಿತ್ತೆಂದು ಮೊ. ಬ್ಲುಮ್‌ರವರು ಹೇಳಿದ್ದಾರೆ.

೦೦೦

## ಸ್ಪೈನ್ ಸರಕಾರದ ವಿಜಯ.

ಸ್ಪೈನಿನಲ್ಲಿ ಯುದ್ಧವು ಎಡೆಬಿಡದೆ ನಡೆಯುತ್ತಿದೆ. ಸರಕಾರೀ ಪಕ್ಷದವರು ಅತ್ಯಂತ ಉತ್ಸಾಹದಿಂದ ಹೋರಾಡುತ್ತಿದ್ದಾರೆ. ಇತ್ತೀಚೆಗೆ ಬಾರ್ಸಿಲೋನದಲ್ಲಿ ವಿದ್ರೋಹಿಗಳ ಹದಿನೆಂಟು ವಿಮಾನಗಳನ್ನು ಸರಕಾರದವರು ಹೊಡೆದು ಕೆಳಗಿಳಿಸಿದರು. ಫ್ರೆಂಚ್ ಸರಕಾರದ

**ಲೋಕಯುದ್ಧದ ಅಂತಿಮಲಾಭ**



ಮಹಾಯುದ್ಧದಲ್ಲಿ ಕೊನೆಗೆ ಗೆಲುವವರು ಇವರಿಬ್ಬರು! ರಣಹದ್ದು ಮತ್ತು ಯುದ್ಧ ಸಾಧನಗಳನ್ನು ಮಾರುವವರು. (ಉಳಿಯುವುದು ಸತ್ತವರ ಗೋರಿ.)

ಸ್ಪೈನಿನ ಗಡಿಯ ಸೇರಿಬಿಯರ್ ಎಂಬಲ್ಲಿ ಒಂದು ಹೊಸ ಪಾಗಾರವನ್ನು ಹಾಕಿದ್ದಾರೆ. ಜನರಲ್ ಫ್ರೇಂಕನು ಕಳೆದ ಸಪ್ಟಂಬರದಲ್ಲಿ ಸರಕಾರದ ಕಡೆಯಿಂದ ಹೋರಾಡಲಿಕ್ಕಾಗಿ ಹೋದ ೩೪ ವರುಷ ಪ್ರಾಯದ ನಾಗಪುರದ ಭಾರತೀಯರಾದ ಶ್ರೀ ಜೆ. ಯಂ. ಹದ್ದಾರ್ ಗಳಿಂದ ಜಪಾನಿಯರನ್ನು ದಿಙ್ಮೂಢರನ್ನಾಗಿ ಮಾಡಿದ್ದಾರೆ. ಕ್ಯೂಕಿಯಂಗ್ ಎಂಬಲ್ಲಿ ಜಪಾನಿಯರು ತಮ್ಮ ಹೊಸ ಸೈನ್ಯವನ್ನು ತರಿಸಿ ಯುದ್ಧಾರಂಭಿಸಿದ್ದಾರೆ. ಅಂತರ್ ರಾಷ್ಟ್ರೀಯ ವಸತಿಯ ಬಳಿಯಲ್ಲಿ ಚೀನೀಯರು ಕೃತಕ ಯುದ್ಧ ವಿಧಾನವನ್ನನುಸರಿಸಿ, ಜಪಾನಿನ ಯಲ್ಲಿ ವ್ಯಕ್ತಪಡಿಸಿದ್ದಾರೆ. ಜಪಾನ್ ಇಂಗ್ಲೆಂಡಿನೊಡನೆ ವ್ಯಾಪಾರ ವಹಿವಾಟವನ್ನು ಎಂದಿನಂತೆಯೇ ನಡೆಸುತ್ತಾ ಚೀನದೊಡನೆ ಅದಕ್ಕಿರುವ ವ್ಯಾಪಾರ ಸಂಬಂಧಕ್ಕೆ ಎಲ್ಲಾ ಸವಲತ್ತುಗಳನ್ನು ಕೊಟ್ಟು ಬ್ರಿಟನಿನ ಮೈತ್ರಿಯನ್ನು ಕೂಡಾ ಸಂಪಾದಿಸುವುದರಲ್ಲಿದೆ.

## ಮೌನವಾಗಿದ್ದವರಿಗೆ ಉಡುಗರೆ.



**ಜನರಲ್ ಫ್ರೇಂಕೊ:** ಬ್ರಿಟಿಷರು ಹೇಗೂ ಸುಮ್ಮನಿದ್ದಾರೆ. ಇನ್ನೊಮ್ಮೆ ಹಾಕೋಣ ಅವರ ಹಡಗಿಗೆ ಬಾಂಬು!

**ಸೀನರ್ ಮುಸ್ಸೋಲಿನಿ:** ಹೂಂ, ನಾಲ್ಕೈದು ಮುಳುಗಿದರೂ ಮಾತಾಡದವರು ಇನ್ನೇನು ಮಾಡಿಯಾರು?

ಎಂಬವರನ್ನು ವೆಲೆನ್ಸಿಯದಲ್ಲಿ ಬಂಧಿಸಿಟ್ಟಿದ್ದಾನೆ. ಬ್ರಿಟಿಷ್ ಸರಕಾರವು ಈ ತನಕ ಅವರನ್ನು ಬಿಡಿಸುವ ಯತ್ನ ಮಾಡಲಿಲ್ಲ.

ooo

### ಚೀನಾಯುದ್ಧದಲ್ಲಿ ಜಪಾನಿನ ಧೋರಣೆ

ಚೀನದಲ್ಲಿ ಯುದ್ಧವು ಇನ್ನಷ್ಟು ಭರದಿಂದ ನಡೆಯುತ್ತಿದೆ. ಚೀನೀಯರು ಕೃತಕ ಯುದ್ಧವಿಧಾನ ವಿಮಾನಪಡೆಯನ್ನು ಅನಿರೀಕ್ಷಿತವಾಗಿ ಕೈವಶಪಡಿಸಿ ಚೀನೀಯ ಧ್ವಜವನ್ನು ಮೇಲೇರಿಸಿ ಜಪಾನಿನ ಸೈನ್ಯವು ಬಂದೊಡನೆಯೇ ಕಣ್ಮರೆಯಾದರು. ಇದು ಚೀನೀಯರ ಕೃತಕ ಯುದ್ಧದ ಒಂದು ಮಾದರಿ.

ಜಪಾನ್ ಚೀನದಲ್ಲಿ ಯಶಸ್ವಿಯಾಗುವುದೆಂದು ಅಲ್ಲಿಯ ಆರ್ಥಿಕ ಮಂತ್ರಿಗಳಾದ ಮಿ। ಐಕಾಡಾರವರು ಇತ್ತೀಚೆಗೆ ಕೊಟ್ಟ ಒಂದು ಹೇಳಿಕೆ

### ಅಸ್ಸಾಮಿನ ಹುಲಿ.

ಅಸ್ಸಾಮಿನ ಪ್ರಚಂಡ ನೆರೆಯಿಂದಾಗಿ ತನ್ನ ಗವಿಯಿಂದ ಹೊರಗೆ ಬಂದ ನಿರಾಶ್ರಿತ ಹುಲಿಯೊಂದು ಹಳ್ಳಿಗನೊಬ್ಬನ ಮನೆ ಹೊಕ್ಕು ವಿಶ್ರಾಂತಿ ಪಡೆಯುತ್ತಿದ್ದಾಗ ಅದನ್ನು ಗುಂಡು ಹೊಡೆದು ಕೊಂದರಂತೆ. ಅದಕ್ಕೆ ಬುದ್ಧಿಯಿದ್ದಿಲ್ಲ. ಬಂಗಾಳದ ಫಜ್ಲುಲ್ ಹಕ್ ಯಾನೆ ಹುಲಿ-ಸಿಂಹರ ಮನೆಗೆ ಹೋಗಿದ್ದರೆ ಸುಖವಾಗಿ ವಿಶ್ರಾಂತಿ ಪಡೆಯಬಹುದಿತ್ತು!



# ವಿಮರ್ಶೆ



### ಮುಂಬಯಿ ಕನ್ನಡಿಗ:

ಮುಂಬಯಿಯಿಂದ ಶ್ರೀ. ಅನಂತ ನಾರಾಯಣ ಮಹಲೆಯವರ ಸಂಪಾದಕತ್ವದಲ್ಲಿ ಹೊರಡುವ ಈ ಹೊಸ ವಾರಪತ್ರಿಕೆಯ ೧೫ನೆಯ ಸಂಚಿಕೆಯು ನಮ್ಮ ಕೈಸೇರಿದೆ. ವಾರ್ಷಿಕ ಹಣ ರೂ. ೩-೮-೦.

ಪತ್ರಿಕೆಯ ಹೊರಗಿನ ಮೈಗಟ್ಟು ಮತ್ತು ವಿಷಯ ವೈವಿಧ್ಯತೆಯು ಪ್ರಶಂಸನೀಯವಾಗಿದೆ. ಮುಂಬಯಿ ಕನ್ನಡಿಗನು ಕನ್ನಡಿಗರಿರುವಲ್ಲೆಲ್ಲಾ ಪ್ರಸಿದ್ಧಿಗೆ ಬರಲೆಂದೇ ನಮ್ಮ ಹಾರೈಕೆಯಾಗಿದೆ.

### ಕೃಷ್ಣ, ಬುದ್ಧ, ಕ್ರೈಸ್ತ ಇದ್ದವರು ಮೂವರು, ಕದ್ದವರು ಯಾರು?

ಹೆಸರಿಂದಲೇ ವ್ಯಕ್ತವಾಗುವಂತೆ ಈ ಪುಸ್ತಕವು ಚರ್ಚಾಸ್ಪದ ವಿಷಯಗಳನ್ನೊಳಗೊಂಡಿದೆ. ಪುಸ್ತಕದಲ್ಲಿ ಕ್ರೈಸ್ತ ಧರ್ಮದ ಮಿಶನರಿಗಳ ಚಟುವಟಿಕೆಗಳನ್ನೂ ಖಂಡಿಸಲಾಗಿದೆ. ಸೂಡ ವಾಸುದೇವ ಜ್ಯೋಸಿ, ಬಿ. ಎ. ಯವರ ಎಲ್ಲಾ ಅಭಿಪ್ರಾಯಗಳನ್ನೂ ನಾವು ಸಮರ್ಥಿಸದಿದ್ದರೂ ತನ್ನ ಅಭಿಮತವನ್ನು ನಿರ್ಭೀತಿಯಿಂದ ಪ್ರಕಟಿಸಿದ್ದಕ್ಕಾಗಿ ಅವರನ್ನು ಅಭಿನಂದಿಸಲೇಬೇಕಾಗಿದೆ.

ಈ ಪುಸ್ತಕವನ್ನು ಬಾರ್ಕೂರಿನ ಜಯಕರ್ನಾಟಕ ವಾಚನಾಲಯದ ಗೌರವ ಕಾರ್ಯದರ್ಶಿಗಳಾದ ಶ್ರೀ. ಬಿ. ಗೋಪಾಲಕೃಷ್ಣರಾಯರಿಂದ ಪಡೆಯಬಹುದು. ಕ್ರಯ ೦-೫-೦.

### ಸ್ನಾಯುಬಲ ಸಂವರ್ಧನ:

ಪ್ರಸಿದ್ಧರಾದ ಶ್ರೀ ಸ್ವಾಮಿ ಶಿವಾನಂದರು ಮರಾಠಿಯಲ್ಲಿ ಬರೆದ ಪುಸ್ತಕವನ್ನು ಶ್ರೀ. ಬಿ. ರಾಘವೇಂದ್ರ ರಾಯರು ಕನ್ನಡಿಸಿ ಕನ್ನಡಿಗರ ಮನ್ನಣೆಗೆ ಪಾತ್ರರಾಗಿದ್ದಾರೆ. ಡೆಮಿ 1/8ನೇ ಆಕಾರದ 40 ಪುಟಗಳು, 80 ಭಾವಚಿತ್ರಗಳಿದ್ದರೂ ಇದರ ಕ್ರಯವು ಕೇವಲ ನಾಲ್ಕಾಣೆ ಮಾತ್ರ. (ಅಂಚೆವೆಚ್ಚ ೦-೧-೩)

ಆರೋಗ್ಯವೇ ಎಲ್ಲದಕ್ಕಿಂತಲೂ ಪ್ರಧಾನವಾಗಿರುವುದರಿಂದ ಕನ್ನಡಿಗರು ಈ ಉಪಯುಕ್ತ ಪುಸ್ತಕದ ಸಹಾಯದಿಂದ ವ್ಯಾಯಾಮಾಭ್ಯಾಸವನ್ನು ಮಾಡಬಹುದು.

### ಉದರದ ಆರೋಗ್ಯ:

ಶ್ರೀ ಸ್ವಾಮಿ ಶಿವಾನಂದ ತೀರ್ಥರು ಬರೆದ ಇನ್ನೊಂದು ಪುಸ್ತಕವಿದು. ಉದರವನ್ನು ಆರೋಗ್ಯದಲ್ಲಿಟ್ಟರೆ ಇಡೀ ದೇಹಕ್ಕೆ ಹೇಗೆ ಆರೋಗ್ಯವು ಸಿಗುವುದೆಂದು ಇದರಲ್ಲಿ ಕೂಲಂಕಷವಾಗಿ ವಿವರಿಸಲಾಗಿದೆ. ಈ ಪುಸ್ತಕದಲ್ಲಿಯೂ ೩೦ಕ್ಕಿಂತ ಮಿಕ್ಕಿ ಚಿತ್ರಗಳಿರುವುದರಿಂದ ಉದರದ ಆಸನಗಳನ್ನು ಮಾಡಲು ಅನುಕೂಲವಾಗಿದೆ. ಕ್ರಯ: ೦-೪-೦ (ಅಂಚೆವೆಚ್ಚ ೦-೧-೩)

ಮೇಲಿನ ಎರಡು ಪುಸ್ತಕಗಳೂ ಶ್ರೀ ಗೋಪಾಲರಾವ್, ಗೌರವ ಕಾರ್ಯದರ್ಶಿ, ಜಯಕರ್ನಾಟಕ ಕ್ಲಬ್ ಬಾರ್ಕೂರು. ಇವರಲ್ಲಿ ದೊರಕುತ್ತವೆ.

---

### ಕುಂದಾಪುರದಲ್ಲಿ ವಾಕ್ಚಿತ್ರ ಕಂಪೆನಿ.

ಕುಂದಾಪುರದಲ್ಲಿ ಶ್ರೀ ಲಕ್ಷ್ಮೀನಾರಾಯಣ ಟಾಕೀಸ್ ಲಿಮಿಟೆಡ್ ಎಂಬ ಕಂಪೆನಿಯ ರಿಜಿಸ್ಟರ್ಡ್ ಆಫೀಸನ್ನು ತೆರೆಯುವ ಸಮಾರಂಭವು ಶ್ರೀ. ಪುಟ್ಟಪ್ಪ ಶೇಟ್‌ರವರ ಕಟ್ಟಡದಲ್ಲಿ ತಾ ೧೪ರಂದು ನಡೆಯಿತು. ಕುಂದಾಪುರದ ಡಿಸ್ಟ್ರಿಕ್ಟ್ ಮುನ್ಸೀಫರಾದ ಶ್ರೀ. ಕೆ. ಆರ್. ಕೃಷ್ಣಯ್ಯ ಚೆಟ್ಟಿಯವರು ಅಧ್ಯಕ್ಷಸ್ಥಾನವನ್ನಲಂಕರಿಸಿದ್ದರು.

---

(೨೫ನೇ ಪುಟದಿಂದ ಮುಂದರಿದುದು.)

ಗಳನ್ನೀಯುವ ಅಕ್ಷಯಪಾತ್ರೆಯೆಂದಿದ್ದಾರೆ. ಸಂಯುಕ್ತ ಪ್ರಾಂತ್ಯದಲ್ಲಿ ನೆರೆಯ ಹಾವಳಿಯಿಂದಾಗಿ ಸುಮಾರು ೧೭೦,೦೦೦ಕ್ಕಿಂತಲೂ ಮಿಕ್ಕಿದ ಜನರು ನಿರಾಶ್ರಿತರಾಗಿರುವುದರಿಂದ ಅವರಿಗೆ ಅವಶ್ಯವುಳ್ಳ ಸಹಾಯಗಳನ್ನು ಕೊಡುವುದರಲ್ಲಿ ಮಂತ್ರಿಗಳು ನಿರತರಾಗಿದ್ದಾರೆ. ಬಿಹಾರಿನಲ್ಲಿ ಬಿಹಾರ್-ಬಂಗಾಳಿ ಪ್ರಶ್ನೆಯು ಇನ್ನೂ ಕೊನೆಗೊಳ್ಳಲಿಲ್ಲ. ಗಡಿನಾಡಿನಲ್ಲಿ ಸರಹದ್ ಜನರ ಉಪಟಳವು ಹೆಚ್ಚಿದೆಯೆಂದೂ, ಸೈನಿಕರಿಗೆ ಗುಂಡೆಸೆಯುತ್ತಿದ್ದಾರೆಂದೂ ಸರಕಾರೀ ವಾರ್ತೆಯು ಹೇಳುತ್ತಿದೆ. ಅಲ್ಲಿಯ ಪ್ರಧಾನರಾದ ಡಾ. ಖಾನ್ ಸಾಹೇಬರು ಬಾನ್ನು ಮೊದಲಾದೆಡೆಗಳಲ್ಲಿ ಸಂಚರಿಸಿ ಅವ್ಯವಸ್ಥೆಯನ್ನು ಕಡಿಮೆ ಮಾಡಲು ಯತ್ನಿಸುತ್ತಿದ್ದಾರೆ. ಇತರ ಪ್ರಾಂತ್ಯಗಳಲ್ಲಿ ವಿವಿಧ ಚಟುವಟಿಕೆಗಳಾಗುತ್ತಿರುವಾಗ ದೂರದಲ್ಲಿರುವ ಅಸ್ಸಾಮಿನಲ್ಲಿಯೂ ಕಾಂಗ್ರೆಸ್ ಪಕ್ಷದ ಸದಸ್ಯರೊಬ್ಬರು ನವರಾಜ್ಯ ಘಟನೆಯು ಹಾನಿಕಾರಕವಾಗಿದೆಯೆಂಬ ಠರಾವನ್ನು ಮುಂದೆ ತಂದಿದ್ದಾರೆ. ಸಿಂಧ ಮಂತ್ರಿಮಂಡಲವು ಕಾಂಗ್ರೆಸ್ ಪಕ್ಷದೊಡನೆ ಮೈತ್ರಿಯನ್ನು ಬೆಳೆಸಲು ಕೈಲಾದ ಯತ್ನಗಳನ್ನು ಮಾಡುತ್ತಿದೆ. ಮುಸ್ಲಿಮ್ ಲೀಗಿನವರು ತಮ್ಮ ಮಂತ್ರಿಮಂಡಲವನ್ನು ಮಾಡಿ ಬಿಡಬೇಕೆಂಬ ಯತ್ನದಲ್ಲಿದ್ದಾರೆ.



# ಮಾಂಸ ಕಂಡ  uscles)


ಬರೆದವರು: ಶ್ರೀ. ಯನ್. ಶ್ರೀಪಾದ ರಾವ್, ಎಲ್. ಎಂ. ಪಿ.
ಮದ್ರಾಸ್ ಸರಕಾರದ ರಿಗಿಷ್ಟರ ಸ್ವರ್ಣ ಪದಕದಾರರು.


ಎಲುಬು, ಯಾ, ಅಸ್ಥಿಪಂಜರದ ವಿಷಯವೂ, ಈ ಎಲುಬುಗಳನ್ನು ಜೋಡಿಸಿದ ಗಂಟುಗಳ ಕ್ರಮದ ವಿಷಯವೂ ಸಂಕ್ಷೇಪವಾಗಿ ತಿಳಿಸಿದ್ದಾಯಿತು. ಈಗ ಈ ಕೈ, ಕಾಲು ವಗೈರೆ ಬೇಕಾದಂತೆ ಚಲನೆಮಾಡಿ ಕೆಲಸಮಾಡುವುದು ಹೇಗೆ ಎಂಬುದನ್ನು ನೋಡುವ. ಮುಂಗೈಯನ್ನು (Forearm) ಹಿಂಗೈಮೇಲೆ (Arm) ಬಗ್ಗಿಸಿದಾಗ (Flexion) ಸರ್ವಸಾಧಾರಣ ಎಲ್ಲರಿಗೂ ಮಾಂಸದ ಕಂಡವು ಒಂದು ಗಟ್ಟಿಯಾದ ಗುಳ್ಳೆಯೋಪಾದಿ ಇರುತ್ತದೆ. ಇದು ಎರಡು ತಲೆಯ ಮಾಂಸದ ಕಂಡ. ಇದಕ್ಕೆ ಬ್ಯಾಸೆಪ್ಸ್(Biceps muscles) ಮಾಂಸಕಂಡ ಅನ್ನುತ್ತಾರೆ. ಮುಂಗೈಯನ್ನು ಚಾಚಿದಾಗ ಅಥವಾ ಬಗ್ಗಿಸದೆ ಇದ್ದಾಗ ಈ ಗಟ್ಟಿಯಾದ ಮಾಂಸದ ಕಂಡದ ಗುಳ್ಳೆಯು ಕಂಡು ಬರುವದಿಲ್ಲ. ಇದೇನಾಗುತ್ತದೆ? ಮುಂಗೈ ಬಗ್ಗಿಸಿದಾಗ ಮಾತ್ರ ಹೇಗೆ ಬರುತ್ತದೆ? ಎಂಬದನ್ನು ತಿಳಿಯೋಣ. ಮುಂಗೈ ಬಗ್ಗಿಸಿದಾಗ (Flexion of elbow) ಈ ಬ್ಯಾಸೆಪ್ಸ್ ಎಂಬ ಮಾಂಸದ ಕಂಡವು ದಪ್ಪವಾಗುತ್ತದೆ ಮತ್ತು ಗಿಡ್ಡವಾಗುತ್ತದೆ. ಇದಕ್ಕೆ ಕಂಟ್ರೇಕ್ಷನ್ (Contraction) ಎಂದು ಹೇಳುತ್ತಾರೆ. ಹೀಗೆ ಈ ಬ್ಯಾಸೆಪ್ಸ್ ಎಂಬುದು ಕಂಟ್ರಾಕ್ಟ್ ಯಾ ಸಣ್ಣದಾಗುವಾಗ, ಹಿಂಭಾಗದಲ್ಲಿರುವುದಕ್ಕೆ ಟ್ರ್ಯಾಸೆಪ್ಸ್ (Triceps) ಈ ಮೂರುತಲೆ ಮಾಂಸ ಕಂಡವು ಸಡಿಲು ಬಿಟ್ಟುಕೊಡುತ್ತದೆ. (Extension) ಹೀಗೆ ಗಂಟಿನ ಸುತ್ತುಮುತ್ತಲೂ ಹಗ್ಗಗಳಂತೆ ಇದ್ದು (Tendons) ಗಂಟುಗಳ ಮೇಲೆ ಮತ್ತು ಕೆಳಗೆ ಗಟ್ಟಿಯಾಗಿ ಕಟ್ಟಿದಂತಿರುವ ಈ ಮಾಂಸಕಂಡವು (Muscles) ಸಣ್ಣದು ಮತ್ತು ದೊಡ್ಡದಾಗುವ ತಮ್ಮಲ್ಲಿರುವ ಸಾಮರ್ಥ್ಯದಿಂದ ಮಾನವನು ಇಚ್ಛಾನುಸಾರ ಕೈಕಾಲು ವಗೈರೆ ಚಲನೆಮಾಡಿ ಬೇಕಾದ ಕೆಲಸಮಾಡಲಿಕ್ಕೆ ಆಗುತ್ತದೆ. ಈ ಮಾಂಸಕಂಡಗಳು ಒಂದಕ್ಕೊಂದು ಸಹಕರಿಸಿ ಚಲನೆಗೆ ಅನುಕೂಲಿಸುವುದಕ್ಕೆ(Co-ordination of muscles) ಮಾಂಸಕಂಡ ಪರಸ್ಪರ ಸಹಕಾರ ಅನ್ನುತ್ತಾರೆ. ಹೀಗೆ ನಮ್ಮ ಇಚ್ಛಾನುಸಾರ ಚಲಿಸಿ ಬೇಕಾದಂತೆ ಕೆಲಸಮಾಡಲಿಕ್ಕೆ ಸಾಮರ್ಥ್ಯ ಇರುವ ಮಾಂಸಕಂಡಗಳಿಗೆ (Volntary muscles) ಇಚ್ಛಾಮಾಂಸಕಂಡ ಅನ್ನಬಹುದು. ಇನ್ನು ಆಹಾರಕೋಶ (Stomach)ಮತ್ತು ಕರುಳುಗಳಲ್ಲಿ (Intestines) ಮಾಂಸಕಂಡ ಉಂಟು. ಈ ಮಾಂಸಕಂಡ ಸಹಾ ಸಣ್ಣದು ದೊಡ್ಡದು ಆಗುತ್ತದೆ. (Contracts and expands) ಮತ್ತು ಆಹಾರವನ್ನು ಸಣ್ಣದಾಗಿ ಅರೆದು ಪುಡಿಮಾಡಿ ನುಣ್ಣಗೆ ಚಟ್ನಿಯಂತೆ ಮಾಡುತ್ತದೆ. ಆದರೆ ಈ ಮಾಂಸಕಂಡಗಳು ಸ್ವಇಚ್ಛಾನುಸಾರ ನಡಿಯುತ್ತದಲ್ಲದೆ, ನಾವು ಇಚ್ಛಿಸಿದಂತೆ ಚಲಿಸಿ ಕೆಲಸಮಾಡುವದಿಲ್ಲ. ಆದ್ದರಿಂದ ಈ ಮಾಂಸಕಂಡಕ್ಕೆ (Involuntary muscles) ಇಚ್ಛಾವಿರಹಿತ ಮಾಂಸಕಂಡ ಅನ್ನುತ್ತಾರೆ. ಈ ಎರಡು ಮಾದರಿಯ ಮಾಂಸಕಂಡದ ರಚನೆ (Structure) ಕೂಡಾ ಬೇರೆ ಬೇರೆ ಯಾಗಿರುತ್ತದೆ. ರಕ್ತವನ್ನು ಪಂಪುಮಾಡಿ ಚಲಾವಣೆ ಮಾಡುವ ಗುಂಡಿಯು ಕೂಡಾ ಮಾಂಸದಕಂಡವೇ ಆಗಿರುತ್ತದೆ. ಈ ಗುಂಡಿಯ ಮಾಂಸಕಂಡವು (Heart muscle) ರಚನೆಯಲ್ಲಿ ಐಚ್ಛಿಕ ಮಾಂಸಕಂಡದಂತಿದ್ದರೂ (Voluntary muscle in structure) ಚಲಾವಣೆ ಆಗುವುದು ನಮ್ಮ ಇಚ್ಛಾನುಸಾರವಲ್ಲ. ಆದುದರಿಂದ ಚಲಾವಣೆ ಆಗುವದು ನಮ್ಮ ಇಚ್ಛಾನುನುಸಾರವಲ್ಲ. ಆದುದರಿಂದ ಚಲಾವಣೆ ವಿಷಯ ಅನೈಚ್ಛಿಕ ಮಾಂಸಕಂಡದಂತಿದೆ (Involuntary muscle in function) ಎನ್ನುತ್ತಾರೆ. ಆಹಾರಕೋಶದ (Stomack) ಕರುಳುಗಳ (Intestines) ಮತ್ತು ಗುಂಡಿಯ (Heart) ಮಾಂಸಕಂಡಗಳು (Muscles) ಮಾನವನ ಇಚ್ಛಾವಿರಹಿತವಾಗಿದ್ದರೂ, (Involuntary) ಕೆಲವರು ಯೋಗಅಭ್ಯಾಸದ ಬಲದಿಂದ ತಮ್ಮ ಇಚ್ಛಾನುಸಾರ ಚಲಾವಣೆ ಆಗುವಂತೆ ಸಾಧನೆಮಾಡಿ ಗುಂಡಿಯ ಹೊಡತ (Heart beat) ಮತ್ತು ಇದರಿಂದ ಉಂಟಾಗುವ ನಾಡಿಯನ್ನು ಹೆಚ್ಚು ಕಡಮೆ ಮಾಡು

ತ್ತಾರೆ ಮತ್ತು ನಿಲ್ಲಿಸುತ್ತಾರೆ. ವಿಷಪದಾರ್ಥಗಳನ್ನು ನುಂಗುತ್ತಾರೆ. ಹೀಗೆ ಅವರು ನುಂಗಿದ ಪದಾರ್ಥಗಳು ಹೊಟ್ಟೆಯಲ್ಲಿ ಇದ್ದಹಾಗೆ ಇರುತ್ತವೆ. ಶ್ವಾಸಕೋಶದಲ್ಲಿ, ರಕ್ತನಾಳಗಳಲ್ಲಿ ಮತ್ತು ರೋಮಕೂಪಗಳಲ್ಲಿ ಕೂಡಾ ಮಾಂಸಕಂಡ ಉಂಟು ದೇಹದ ಎಲ್ಲಾ ಮಾಂಸಕಂಡವನ್ನು ಚಲಿಸದಂತೆ ಸುಮ್ಮನೆ ಸತ್ತಹಾಗೆ (Suspended animation) ಆರು ತಿಂಗಳು ವರೆಗೆ ಹೂಳಿಟ್ಟರೂ ಇದ್ದಹಾಗೆಯೇ ಇದ್ದು ಪುನಃ ಚಲನೆಯನ್ನು ಶುರುಮಾಡಿ ಜೀವಂತರಾಗಿದ್ದವರು ಇದ್ದಾರೆ. ಇನ್ನು ನೋಡಿದರೆ ಯೋಗಿಗಳು ತವ... ಯೋಗಸಾಧನದಿಂದ ಸಾವಿರಾರು ವರುಷ ಜೀವಿಸಿದ್ದ... ಎಂಬುದು ಸುಳ್ಳೆಂದು ಹೇಳಲಿಕ್ಕೆ ಸಾಧ್ಯವಿಲ್ಲ. ಇದಲ್ಲ... ಈ ಮಾಂಸಕಂಡಕ್ಕೆ ವ್ಯಾಯಾಮ, ಕುಸ್ತಿ, ಪ್ರಾಣಾಯಾಮ ವಗೈರೆ (Physical culture) ಕಸ್ರ... ಸಾಧನಗಳಿಂದ ಎಷ್ಟುರವಟ್ಟಿನ ಬಲ, ಅಥ... ಸಾಮರ್ಥ್ಯ ಉಂಟುಮಾಡಬಹುದೆಂಬದನ್ನೂ ನಿರ್ಧ... ಸಲಿಕ್ಕೆ ಸಾಧ್ಯವಿಲ್ಲ.

---

## ತುಸು ವಿನೋದ

ಸಾಹುಕಾರ:— ನಿಮಗೆ ಐದು ರೂಪಾಯಿ ಬೇಕಾದದ್ದೇನೋ ನಿಜ! ಆದರೆ ನಿಮ್ಮಮೇಲೆ ಹೇಗೆ ವಿಶ್ವಾಸವಿಡಲಿ?

ಸಾಲಗಾರ:— ರಾಯರೇ! ನನ್ನ ಹೆಸರೇ "ಸಂಭಾವಿತ ವಿಶ್ವಾಸರಾವ್," ಅಂದಮೇಲೆ ಇದಕ್ಕೂ ಹೆಚ್ಚಿನ ವಿಶ್ವಾಸವೇನಾದ... ತಮಗೆ ಬೇಕೇ?

"ಸದಾನಂದ" ಅಂಕೋ...

---


ನೀವು ಪ್ರಪಂಚದ ವೈಶಿಷ್ಟ್ಯಗಳನ್ನು ತಿಳಿಯಬಯಸುವಿರಾ . . . ?

ಹಾಗಾದರೆ

ಪ್ರತಿ ತಿಂಗಳ ತಾ. 15ಕ್ಕೆ ಪ್ರಕಟವಾಗುವ

# ವರ್ತಕ ಧುರೀಣ

ಆಧುನಿಕ ಭಾರತಕ್ಕೊಪ್ಪುವ ರಾಷ್ಟ್ರೀಯ ಧ್ಯೇಯದ ಮಾಸ ಪತ್ರಿಕೆಯನ್ನು ಅಗತ್ಯವಾಗಿ ಓದಲೇಬೇಕು

ಪ್ರತಿಯೊಂದು ಸಂಚಿಕೆಯಲ್ಲೂ ಪ್ರಕಟವಾಗುವ ಮಿಸ್ಟರ್ ಜಮದಗ್ನಿ ಯವರ ರಿಪೋರ್ಟು - ಯಾ - ಸಿಂಹಾವಲೋಕನವನ್ನು ಓದಲು ಮರೆಯಬೇಡಿರಿ

ಈ ಪತ್ರಿಕೆಯಲ್ಲಿ ವಿದ್ವಜ್ಜನರಿಂದ ಬರೆಯಲ್ಪಡುವ ರಾಜಕೀಯ, ಸಾಮಾಜಿಕ, ಐತಿಹಾಸಿಕ, ಪ್ರಾಪಂಚಿಕ, ಧಾರ್ಮಿಕ ಮೊದಲಾದ ವಿವಿಧ ಲೇಖನಗಳೂ, ಕಥೆಗಳೂ, ಉಪನ್ಯಾಸಗಳೂ, ಟೀಕೆ-ಟಿಪ್ಪಣಿಗಳೂ ಪ್ರಕಟವಾಗುತ್ತಿವೆ.

ಯಾವುದೇ ಸರಕಿನ ಪ್ರಚಾರವಾಗಬೇಕಾದರೂ - ಈ - ಪತ್ರಿಕೆಯು ಜಾಹೀರಾತುದಾರರಿಗೊಂದು ಉತ್ತಮ ಸಾಧನ ಜಾಹೀರಾತುಗಳ ದರಕ್ಕೆ ಕೆಳಗಿನ ವಿಳಾಸಕ್ಕೆ ಬರೆದುಕೊಳ್ಳಿರಿ.

೧೯೩೫ರಲ್ಲಿ ಜನ್ಮವೆತ್ತಿ ಜನಾದರಣೀಯವಾದ

ಈ ಪತ್ರಿಕೆಯು ತನ್ನದೇ ಆದ ಒಂದು ವಿಶಿಷ್ಟ ಧ್ಯೇಯವನ್ನು ಕಾಯ್ದುಕೊಂಡಿ...

ವಾರ್ಷಿಕ ಚಂದಾ: ಊರವರಿಗೂ ಪರಊರವರಿಗೂ :ರೂ.1-8-0

ಬಿಡಿ ಸಂಚಿಕೆ 0-2-0
ಹಿಂದಿನ ಸಂಚಿಕೆ 0-3-0

ಪ್ರೊಪ್ರೈಟರ್, ವರ್ತಕ ಧುರೀಣ, ಉಡುಪಿ, ದಕ್ಷಿಣ ಭಾರತ.

# ವಾರದ ಪಂಚಾಂಗ

ಬಹುಧಾನ್ಯ ಸಂ।ರದ ಶ್ರಾವಣ
ಕೃಷ್ಣಪಕ್ಷ ಮತ್ತು ಭಾದ್ರಪದ ಶುಕ್ಲಪಕ್ಷ
ದಕ್ಷಿಣಾಯನಂ ವರ್ಷರ್ತುಃ



ಸಿಂಹ (ಸೋಣ) ೫ರಿಂದ ೧೧ರ ವರೆಗೆ

ಮಹಾನಕ್ಷತ್ರ—ಮಘಾ

## ಆರ್ಯಭಟ ವಾಕ್ಯಕರಣರೀತ್ಯಾ ನಿತ್ಯಪಂಚಾಂಗಂ

| ಅಗೋಸ್ತು ತಾರೀಕು | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 21 | ೧೧ | ರ೫೩। | ಮೃ೧೦ | ವ೪೫||| | ಬ೨೬ | ೨೯|| | ೪೨|| | ಪಶ್ಚಾದಸ್ತಂಬು ಹ್ತ್ತ೪ಶು೨೩ ಸ್ಮಾರ್ತಾನಾಂ೧೧ |
| 22 | ೧೨ | ಚ೪೭। | ಆರ್೫||| | ಸಿ೩೮ | ಕೌ೨೦ | ೩೩||| | ೫೬। | ಕರ್ಕಟಿಚ೪೭||| ಆ್ಲ೪ಕು೪೧ ಭಾಗವತ ವೈಷ್ಣವ೧೧ |
| 23 | ೧೩ | ಕು೪೧। | ಪ್ನು೧||| ಉ್ಪ೫೬ | ವ್ಯ೩೦|| | ಗ೧೪ | ೨೦। | ಶೆ.। ಅ೪೩ | ಮ೩ರ೪೨ಪ್ರ. ಸಾಯನಕನ್ಯಾಸಂ. ಮಂಗಳಗೌರಿವ್ರತಂ |
| 24 | ೧೪ | ಬು೩೯। | ಆ್ಲ೫೪। | ವ೨೩ | ಭ೮ | ೨೭||| | ೫೦|| | ಸಿಂಹೆಚ೫೪। ಚಿ೧ಶು೩೨ ಮಾಸಶಿವರಾತ್ರಿಃ |
| 25 | ೩೦ | ಗು೩೦ | ಮ೫೧ | ಪ೧೬ | ಚ೨|| | ೨೨|| | ೪೫। | ● ಅಮಾವಾಸ್ಯಾ |
| 26 | ೧ | ಶು೨೫|| | ಹು೪೮||| | ಶಿ೯|| ಸಿ೩|| | ಬ೨೫|| | ೧೦। | ೩೩। | ಮ೪ವಬು೪ ಚಂದ್ರದರ್ಶನಂ |
| 27 | ೨ | ಶ೨೯|| | ಉ್ತ೪೭। | ಉ್ಪ೫೪||| | ಕೌ೨೧|| | ೬ | ೨೯|| | ಮ೪ರ್೯ಕನ್ಯಾಚ೩||ಮ೧ ಸಿಂಹೆಕು೫೨ಚಿ೨ಶು೫೦ ಬಲ.ಜ. |

## ಕೇತಕೀ ದೃಕ್ಸಿದ್ಧರೀತ್ಯಾ ನಿತ್ಯಪಂಚಾಂಗಂ

| ಅಗೋಸ್ತು ತಾರೀಕು | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 21 | ೧೦ | ರ೬। | ಮೃ೧೫|| | ವ್ರ೪೯|| | ಭ೬। | ೨೫|| | ೪೬|| | ಹ೪ಶು೩೫ ಸ್ಮಾರ್ತಾನಾಂ೧೧ |
| 22 | ೧೨ | ಉ್ಪ೫೩ ಚ೫೧। | ಆರ್೧೦। | ಸಿ೪೦। | ಕೌ೨೫। | ೩೭। | ೫೮||| | ಕರ್ಕಟಿಚ೫೦||| ಆ್ಲ೪ಕು೩೨ ಪೂ೧ವಬು೫ ಭಾ ವೈ.೧೧ |
| 23 | ೧೩ | ಕು೪೩||| | ಪ್ಷು೪। ಉ್ಪ೫೩|| | ವ್ಯ೩೦||| | ಗ೧೭ | ೨೪ | ಶೆ.೨|| ೪೩|| | ಮ೩ರ೨೬ಪ್ರದೋ. ಕನ್ಯಾಯನಂ೪೭|||। ಶರದಿ ಇಷಾರಂಭಃ |
| 24 | ೧೪ | ಬು೩೪|| | ಆ್ಲ೫೧|| | ವರಿ೨೧ | ಭ೮||। | ೨೬। | ೪೭||| | ಸಿಂಹೆಚ೫೧|| ಚಿ೧ಶು೪೩ |
| 25 | ೩೦ | ಗು೨೬। | ಮ೪೫|| | ಪ೧೧|| | ಚ|| | ೧೮। | ೪೦ | ● ಆಮಾ.ಕುಶಗ್ರಹಣಂ ಮ೪ರ೫೩ಕನ್ಯಾಚ೫೪||ಮ೪ವಬು೧೬ ಚಂದ್ರದರ್ಶದಂ |
| 26 | ೧ | ಶು೧೮||| | ಪೂ೪೦|| | ಶಿ೨|| ಉ್ಪ೫೨ | ಬಾ೧೮||| | ೩||.ವಿ ೫೭ ವಿ.ಶೆ||| | ೨೫||| | ಸಿಂಹೆಕು೪೬ಚಿ೨ಶು ೫೩ ಮನ್ವಾದಿಃ ರಜಬ್‌ವ. ಜಯಂತೀ |
| 27 | ೨ | ಶ೧೨||| | ಉ್ತ೩೬|| | ಸಾ೪೭ | ಕೌ೧೨|| | ೫೬। | ೧೯||| | |

# ಈ ವಾರದಲ್ಲಿ ನಿಮ್ಮ ಗ್ರಹಗತಿ ಹೇಗಿದೆ!



**ವಾರದ ಭವಿಷ**

ತಾರೀಕು ೨೧-೮-೧೯೪೮ರಿಂದ
ತಾರೀಕು ೨೭-೮-೧೯೪೮ರ ವರೆಗೆ.

### ಮೇಷ:—

ಎತ್ತ ನೋಡಿದರೂ ಕಗ್ಗತ್ತಲೆಯು ಆವರಿಸಿಕೊಂಡಿರುವುದು ಇವರ ಜೀವನ ಪಥದಲ್ಲಿ. ಸಂಸಾರದಲ್ಲಿ ಹೆಂಡತಿಯಿಂದಾಗಲಿ ವ ಮಕ್ಕಳಿಂದಾಗಲೀ ಅಥವಾ ಪಶುಗಳಿಂದಾಗಲೀ ಚಿಂತೆಯು ತಪ್ಪಿದ್ದಲ್ಲ. ಇತರ ವ್ಯವಹಾರದಲ್ಲಿ ಯಾದರೋ ಸರ್ವತ್ರ ಶತ್ರುಪೀಡೆಯು ಅಧಿಕಾಧಿಕವಾಗಿರುವುದು. ಹಣದ ಅಡಚಣೆಯಿಂದಾಗಿ ಇವರ ಮಾನಕ್ಕೇನೇಹಾನಿ ಸಂಭವಿಸುವುದು ಮಾತ್ರವಲ್ಲ ಇತರರಲ್ಲಿ ದೀನರಾಗಿ ವರ್ತಿಸಬೇಕಾಗುವುದು. ಶರೀರದ ಆರೋಗ್ಯವು ಕೆಟ್ಟು ಹೊಟ್ಟೆನೋವು ತಾಪಜ್ವರ ಮುಂತಾದ ವ್ಯಾಧಿಗಳು ತಲೆದೋರುವವು. ಅನರ್ಥ ಪರಂಪರೆಗಳು, ಶೋಕ ಸಮೂಹಗಳು ಬೆನ್ನಟ್ಟಿಕೊಂಡೇ ಇರುವವು. ಮತ್ತು ಈ ವಾರದಲ್ಲಿ ನೀಚ ಜನರ (ದುಷ್ಟರ) ಸಹವಾಸದಿಂದಾಗಿ ಮಾನಹಾನಿ, ಧನನಾಶ ಇತ್ಯಾದಿ ಅಶುಭಗಳು ಆಗುವವು. ಪ್ರವಾಸವು ಅಕಸ್ಮಾತ್ ಸಂಭವಿಸಿ ಮಾರ್ಗದಲ್ಲಿ ತುಂಬಾ ವಿಘ್ನಗಳುಂಟಾಗುವವು. ತಾ. 21, 22, 27 ಈ ದಿನಗಳ ಮಟ್ಟಿಗೆ ಸ್ವಲ ಶುಭವಿದೆ. ಆರೋಗ್ಯ ಲಾಭ, ಪ್ರವರ್ತಿಸಿದ ಕಾರ್ಯ ಜಯ, ಗೌರವ ಮತ್ತು ಮನಸ್ಸಿಗಾನಂದ ಇತ್ಯಾದಿ.

### ವೃಷಭ:—

ಯಾವ ಭಾಗದಲ್ಲಿ ನೋಡಿದರೂ ಈ ವಾರವು ನಿಮಗೆ ಹೆಚ್ಚಿನಂಶ ಶುಭಫಲದಾಯಕವಾಗಿರುವುದು. ಹೊಸ ಮಿತ್ರರನೇಕರು ನಿಮಗೆ ಎಲ್ಲಾ ಭಾಗದಲ್ಲೂ ನೆರವಾಗುವರು. ಗೃಹಕೃತ್ಯದಲ್ಲಿ ಸಂಪೂರ್ಣ ಮನಸ್ಸಿಗೆ ಸಮಾಧಾನವಾಗಿರುವುದು. ಕೈಕೊಂಡ ಕಾರ್ಯದಲ್ಲಿ ತುಂಬಾ ಧನಲಾಭವಾಗುವುದು. ಸಮಾಜದಲ್ಲಿ ಗೌರವವು ದೊರಕುವುದು. ಪುತ್ರರಿಂದಾಗಿ ಲಾಭವಾಗುವ ಯೋಗವಿದೆ. ನಿಮ್ಮಲ್ಲಿ ಮನಸೊಂದು ದೂರ ಸರಿದಿರುವ ನಿಮ್ಮ ಬಂಧುಬಾಂಧವರು ಸುಮನಸ್ಕರಾಗಿ ನಿಮ್ಮನ್ನೇ ಪುನಃ ಸೇರುವರು. ಪ್ರಬಲರಾದ ಶತ್ರುಗಳಿಂದುಂಟಾಗುವ ಅನಿಷ್ಟಗಳು ನಿಮ್ಮ ಮಿತ್ರರ ಬೆಂಬಲದಿಂದಾಗಿ ನಿವಾರಿತವಾಗಿ ಶತ್ರುಗಳು ದೂರ ಸರಿಯುವರು. ಪರಕೀಯವಾವ ಶ್ರೀಯಾಗಲೀ ಸ್ತ್ರೀಯಾಗಲೀ ನಿಮ್ಮ ಸ್ವಾಧೀನವಾಗುವ ಸಂಭವವಿದೆ. ತಾ. 23, 24 ಈ ದಿನಗಳು ಅತ್ಯುತ್ತಮವಿವೆ. ಕಾರ್ಯ ಜಯ, ಸ್ತ್ರೀ ಸುಖ. ಇತರ ದಿನಗಳಲ್ಲಿ ಕೆಲ ಅನಿಷ್ಟ ಗ್ರಹರಿಂದಾಗಿ ಆರೋಗ್ಯಕ್ಕೆ ಹಾನಿಯೂ, ತತ್ಸಂಬಂಧವಾಗಿ ಸ್ವಲ್ಪ ಧನವ್ಯಯವೂ ಆಗಬಹುದು. ಮುಂಜಾಗ್ರತೆಯಿಂದಿದ್ದರೆ ಇವುಗಳಿಂದ ಪಾರಾಗಬಹುದು.

### ಮಿಥುನ:—

ವ್ಯಾವಹಾರಿಕ ಭಾಗದಲ್ಲಾಗಲೀ ಶಾರೀರಕ ಭಾಗದಲ್ಲಾಗಲೀ ಇತರ ಕೌಟುಂಬಿಕ ವಿಷಯದಲ್ಲಾಗಲೀ ಏನೂ ನ್ಯೂನಾತಿರಿಕ್ತಗಳು ಇಲ್ಲದಿರುವುದರಿಂದ ಈ ವಾರವು ನಿಮಗೆ ಕ್ಷಣದಂತೆ ಬೇಗನೆ ಕಳೆದು ಹೋಗುವುದು. ಉದ್ಯೋಗಾಭಿಲಾಷಿಗಳಿಗೆ ಅವರ ಇಚ್ಛೆಯು ಪೂರ್ತಿಯಾಗುವುದು. ಶತ್ರುಗಳು ನಾಶಹೊಂದುವುದರಿಂದಾಗಿಯೂ ಮಿತ್ರಭಾವವನ್ನು ಪಡೆಯುವುದರಿಂದ ಸಂತೋಷದಲ್ಲಿರುವರು. ಮತ್ತು ಇವರ ವೃತ್ತಿಯಿಂದಲೇ ಧನಲಾಭವಾಗುವುದು. ಆದರೆ ಆ ಧನಕ್ಕೆ ಶತ್ರುಗಳ ಭೀತಿಯು ತುಂಬಾ ಇದೆ. ತಿಳಿದೂ ತಿಳಿದೂ ವಂಚಕ ಕರ್ಮದಲ್ಲಿ ಪ್ರವರ್ತಿಸುವರು. ಈ ಕಾರ್ಯದಿಂದಾಗಿ ಮನಸ್ಸಿಗೆ ಒಂದು ಚಿಂತೆಯು ಅಂಟಿಕೊಳ್ಳುವುದು, ಎಂಥಾ ಕಷ್ಟಸಾಧ್ಯವಾದ ಕಾರ್ಯವನ್ನು ಕೂಡ ಸುಲಭದಲ್ಲಿ ಕೊನೆಗಾಣಿಸುವ ಒಂದು ವಿಶೇಷ ಬುದ್ಧಿವಂತಿಕೆಯು ಇವರಲ್ಲಿದೆ. ಈ ನೈಪುಣ್ಯದಿಂದಾಗಿ ಯಾರೂ ಇವರ ಮಾತನ್ನುಲ್ಲಂಘಿಸದೆ ಇವರಂತೆಯೆ ವರ್ತಿಸುವರು. ಜನರಲ್ಲಿ ಇವರು ಮುಂದಾಳಾಗುವರು. ತಾ. 23, 25, ಮತ್ತು 27 ಈ ದಿನಗಳಮಟ್ಟಿಗೆ ಸ್ವಲ್ಪ ಜಾಗರೂಕರಾಗಿರಬೇಕು. ಸ್ವಕೀಯರಲ್ಲಿ ಅವಿಶ್ವಾಸವು ತಲೆದೋರಿ ಅದರಿಂದ ಮಾನಕ್ಕೂ ಧನಕ್ಕೂ ಹಾನಿ ಸಂಭವಿಸೀತು.

### ಕರ್ಕಾಟಕ:—

ಈ ವಾರವು ಈ ರಾಶಿಯವರಿಗೆ ಹೆಚ್ಚಿನಂಶ ಕೆಟ್ಟದ್ದಿರುವುದು. ಮನಸ್ಸು ಚಂಚಲವಾಗಿರುವುದರಿಂದ ಮಾಡತಕ್ಕ ಕಾರ್ಯಗಳನ್ನು ಅನ್ಯಥಾ ಮಾಡಿ ವಿಪರೀತವಾದ ಫಲವನ್ನು ಹೊಂದುವರು. ಬಾಯಿಯಲ್ಲಿ ಒಂದು ರೀತಿ ಹೇಳಿ ಕಾರ್ಯದಲ್ಲಿ ಮತ್ತೊಂದು ರೀತಿಯಾಗಿ ಮಾಡುವುದರಿಂದ ಇವರ ಮಿತ್ರರೂ ಶತ್ರುಗಳಾಗಿ ಪರಿಣಮಿಸುವರು. ಮತ್ತು ಶರೀರದ ಆರೋಗ್ಯವು ಕೆಡುವುದರಿಂದಲೂ ಪಿತ್ಥಸಂಬಂಧಿಯಾದ ರೋಗವಿಶೇಷವು ಕಂಡುಬರುವುದರಿಂದಲೂ ಮನೋವ್ಯಥೆಯುಳ್ಳವರಾಗಿ ರಾತ್ರಿ ನಿದ್ರೆ ಸಹಾ ಬರಲೊಲ್ಲದು ಆರೋಗ್ಯವು ಎಷ್ಟರಮಟ್ಟಿಗೆ ಕೆಡಲು ಶಕ್ಯವಿದೆಯೋ ಅಷ್ಟು ಕೆಡುವುದು. ಕುಜನರ ಸಂಸರ್ಗದಿಂದ ಇವರಲ್ಲಿರುವ ಧರ್ಮಬುದ್ಧಿಯು ನಾಶವಾಗಿ ಅಧರ್ಮ, ಅಕಾರ್ಯದಲ್ಲಿ ಪ್ರವರ್ತಿಸುವುದರಿಂದ ತನ್ನ ಸಮೀಪದ ಜನರೂ ಇತರ ಆಪ್ತೇಷ್ಟರೂ ದೂರ ತೊಲಗುವರು. ಅಕಾರಣವಾಗಿ ಸ್ತ್ರೀಯರಲ್ಲಿ ಕಲಹವುಂಟಾಗುವುದು. ತಾ. 23, 24 ಮತ್ತು 27 ಈ ದಿನಗಳು ಉತ್ತಮವಿವೆ. ಸುಖಶಯನ, ನೂತನವಸ್ತ್ರಲಾಭ.

### ಸಿಂಹ:—

ನಿಮ್ಮಲ್ಲಿ ಬುದ್ಧಿವಂತಿಕೆಯು ಚೆನ್ನಾಗಿದೆ. ನಾಲಿಗೆಯು ಬೇಕಾದಂತೆ ತಿರುಗುವುದು. ಮಾತಿನ ಚಮತ್ಕಾರದಿಂದ ಯಾವ

ನ್ನು ಕೂಡ ಒಮ್ಮೆಗೆ ಮೋಹಿಸುವಿರಿ. ಈ ವಾರದಲ್ಲಿ ನಿಮಗೆ ಕುಟುಂಬ ಸಂಬಂಧವಾದ ತಾಪತ್ರಯವೇನೂ ಇಲ್ಲವು. ಆದರೂ ಶರೀರದ ಆರೋಗ್ಯವು ಕೆಡುವುದರಿಂದ ನೇತ್ರ ಸಂಬಂಧವಾದ ರೋಗವು ಆರಂಭವಾಗಿ ಅತ್ಯಂತ ಸಂತಾಪಕ್ಕೆ ಕಾರಣವಾಗುವುದು. ಪರರಿಗೆ ಅಹಿತಗಳಾದ ಕರ್ಮಗಳನ್ನು ಮಾಡುವುದರಿಂದಲೂ, ಅವಾಚ್ಯಗಳಾದ ಮಾತನ್ನಾಡುವುದರಿಂದಲೂ ಕಲಹವುಂಟಾಗಿ ತುಂಬಾ ಹಣದ ಖರ್ಚಿಗೆ ಮಾರ್ಗವಾಗುವುದು. ಅಕಸ್ಮಾತ್ತಾಗಿ ಪ್ರವಾಸವು ಮಾಡಬೇಕಾಗಿ ಬರುವುದು. ಮನಸ್ಸಿನ ಭಯಕ್ಕೆ ಕಾರಣಗಳಾದ ಕೆಲವು ಕಾರ್ಯಗಳು ಅಕಸ್ಮಾತ್ತಾಗಿ ಸಂಭವಿಸುವವು. ಹಣದ ಮುಗ್ಗಟ್ಟಿನಿಂದಾಗಿ ಎಲ್ಲಿ ಹೋದರೂ ಒಂದಿಷ್ಟು ಗೌರವಿಸುವವರಿಲ್ಲ. ಎಲ್ಲರಿಂದಲೂ ತಿರಸ್ಕಾರವೇ ದೊರೆಯುವುದು. ತಾ. 23, 24 ಮತ್ತು 27 ಈ ದಿನಗಳು ಬಹಳ ಕೆಟ್ಟವಿವೆ. ಈ ದಿನಗಳಲ್ಲಿ ಧನ ಮತ್ತು ಮಾನಕ್ಕೆ ಹಾನಿ ಸಂಭವಿಸುವುದು. ಕಾರ್ಯಕ್ಕೆ ತುಂಬಾ ವಿಘ್ನಗಳುಂಟಾಗುವವು.

**ಕನ್ಯಾ:—**

ಈ ವಾರವು ನಿಮಗೆ ಎಲ್ಲಾ ಭಾಗದಲ್ಲೂ ಕೆಟ್ಟದ್ದೇ ಇರುವುದು. ಶತ್ರುಗಳಿಂದ ನೀವು ಪರಾಜಿತರಾಗುವಿರಿ. ಕೈಕೊಂಡ ಕಾರ್ಯದಲ್ಲಿ ಅಪಜಯರೂಪ ಫಲಪ್ರಾಪ್ತಿಯಾಗುವುದು. ಅನಿಷ್ಟಗಳ ಸಮೂಹಗಳು ಒಂದರ ಹಿಂದೊಂದೆಂಬಂತೆ ಬರುತ್ತಲೇ ಇರುವುವು. ಆರೋಗ್ಯ ಪ್ರಾಪ್ತಿಗೂ ಇತರ ವ್ಯವಹಾರಿಕ ಕಾರ್ಯಗಳಿಗೂ ಹಣ ಖರ್ಚು ಮಾಡಬೇಕಾಗುವುದು. ಮಾತ್ರವಲ್ಲ, ವ್ಯಾಜ್ಯದ ಸಲುವಾಗಿ ತುಂಬಾ ಧನವ್ಯಯವಾಗಲಿದೆ. ಅಕಸ್ಮಾತ್ತಾಗಿ ಕಲಹ ಮತ್ತು ಪ್ರವಾಸಗಳು ಸಂಭವಿಸುವ ಯೋಗವಿದೆ. ಆದ್ದರಿಂದ ಪೂರ್ವೋಕ್ತ ದೋಷಗಳ ನಿವೃತ್ತಿಗಾಗಿ ಧರ್ಮ ಕಾರ್ಯದಲ್ಲಿಯೇ ಆಸಕ್ತರಾಗಬೇಕು. ಕುಲಾಚಾರಗಳನ್ನು ಚೆನ್ನಾಗಿ ಆಚರಿಸತಕ್ಕವರಿಗೆ ಈ ದೋಷಗಳಲ್ಲಿ ಹೆಚ್ಚಿನಾಂಶವು ಫಲಿಸದೆ ಜಯವೂ ಸನ್ಮಾನಗಳೂ ದೊರೆಯುವುವು. ತಾ. 25, 26 ಈ ಎರಡು ದಿನಗಳು ಬಹಳ ಕೆಟ್ಟವುಗಳಾಗಿವೆ. ಅನವಶ್ಯಕವಾಗಿ ಧನವ್ಯಯವೂ, ಆರೋಗ್ಯಕ್ಕೆ ಹಾನಿಯೂ ಕೂಡ ಆಗುವುದು. ಆದಕಾರಣ ಎಷ್ಟರ ಮಟ್ಟಿಗೆ ಜಾಗ್ರತೆಯಿಂದಿದ್ದರೂ ಅಷ್ಟರ ಮಟ್ಟಿನ ಒಳ್ಳೆಯದಿದೆ.

**ತುಲಾ:—**

ತನ್ನ ಶರೀರ ವಿಷಯದಲ್ಲಾಗಲೀ, ಸಾಂಸಾರಿಕ ಭಾಗದಲ್ಲಿಯಾಗಲಿ, ಇತರ ವ್ಯಾಪಾರ ವ್ಯವಹಾರಿಕ ಸಂಬಂಧದಲ್ಲಾಗಲಿ ಎಳ್ಳಷ್ಟೂ ಕೊರತೆಯಿಲ್ಲವು ಈ ವಾರದಲ್ಲಿ ಈ ರಾಶಿಯವರಿಗೆ. ತಮೋಗ್ರಹರಾದ ರಾಹು ಕೇತುಗಳನ್ನುಳಿದು ಇತರ ಎಲ್ಲಾ ಗ್ರಹರೂ ಇಷ್ಟಸ್ಥಾನದಲ್ಲಿದ್ದು ಪ್ರತಿಯೊಂದು ಕಾರ್ಯಕ್ಕೂ ಸೆವನಕ್ಕೆ ಮಾತ್ರ ಪುರುಷ ಪ್ರಯತ್ನವನ್ನು ತೋರಿಸಿ ಸಂಪೂರ್ಣ ಕಾರ್ಯವನ್ನೂ ಅವರೇ ಪೂರ್ತಿಗೊಳಿಸಲು ಸಮರ್ಥರೂ ಸಿದ್ಧರೂ ಆಗಿರುವರು. ಇಷ್ಟೊಂದು ಅನುಕೂಲ್ಯವು ಇನ್ನಾವ ರಾಶಿಯವರಿಗೂ ಇಲ್ಲವು. ಆದ್ದರಿಂದ ನೌಕರಿ ಭಾಗದಲ್ಲಿರುವವರಿಗಾಗಲಿ ಯಾ ಉದ್ಯೋಗಾಪೇಕ್ಷಿಗಳಿಗಾಗಲಿ ಬಹಳ ಉತ್ತಮವಿದೆ. ವಿದ್ಯಾರ್ಥಿಗಳಿಗೂ ಪರೀಕ್ಷಾಭಾಗದಲ್ಲಿ ಶುಭವೇ ಆಗುವುದು. ಹೊಸ ಮಿತ್ರರನೇಕರ ಪರಿಚಯವಾಗುವುದಲ್ಲದೆ ಅವರಿಂದಾಗಿ ಧನಲಾಭವೂ ಆಗುವುದು. ಯಾವಾಗಲೂ ಆರೋಗ್ಯವಂತರಾಗಿರುವರು. ಕೈಕೊಂಡ ಕಾರ್ಯವು ಜಯವಾಗುವುದು. ಶತ್ರುಗಳಾದರೂ ವೈರವನ್ನು ಬಿಟ್ಟು ಮಿತ್ರರಂತೆ ವರ್ತಿಸುವರು. ನಾನಾ ರೀತಿಗಳಿಂದ ಧನ ಲಾಭವಾಗುವ ಸಂಭವವಿರುವುದು. ಸ್ತ್ರೀ ಸಂಬಂಧವಾದ ಶಯನ ಸುಖವನ್ನು ಚೆನ್ನಾಗಿ ಹೊಂದುವರು. ತಾ 21, 22 ಮತ್ತು 27ರಲ್ಲಿ ರಾಜಭಯಕ್ಕೆ ಕಾರಣವಾಗತಕ್ಕ ಕಾರ್ಯಗಳು ಅಜ್ಞಾನದಿಂದ ಅಕಸ್ಮಾತ್ ಆಗಬಹುದು. ಆ ಭಾಗದಲ್ಲಿ ತುಂಬಾ ಎಚ್ಚರಿಕೆಯಿಂದಿರಿ. ಮತ್ತು ಆರೋಗ್ಯ ಭಾಗವನ್ನೂ ಸ್ವಲ್ಪ ನೋಡಿಕೊಂಡಿರುವುದೊಳಿತು.

**ವೃಶ್ಚಿಕ:**

ಈ ವಾರದಲ್ಲಿ ಈ ರಾಶಿಯವರಿಗೆ ಶುಭಾಶುಭ ಗ್ರಹರು ಸಮಾನರಾಗಿ ಸಮಬಲರಿರುವುದರಿಂದ ಹೆಚ್ಚಿನ ಕೆಟ್ಟದ್ದಾಗಲೀ ಒಳ್ಳೆಯದಾಗಲಿ ಆಗುವಂತಿಲ್ಲ. ಇವರು ಕೈಕೊಂಡ ಕಾರ್ಯವು ಕೊನೆಗೊಳ್ಳುವುದು. ಇವರ ಉದ್ಯೋಗ ವ ಇನ್ನಿತರ ಸ್ಥಿತಿಯು ಮುಂಚಿಗಿಂತ ಎಷ್ಟೋ ಸುಧಾರಿಸುವುದು. ಮೃಷ್ಟಾನ್ನ ಭೋಜನವೂ ಸಿಗುವುದು. ಆದರೂ ರೋಗ ಬಾಧೆಯಿಂದಾಗಿ ಅನವರತವೂ ದೇಹಪೀಡೆ ಇದ್ದೇ ಇರುವುದು. ಇಷ್ಟಮಿತ್ರರಲ್ಲಿಯೂ ಬಂಧು ಬಾಂಧವರಲ್ಲೂ ಮನೋವೈಷಮ್ಯವುಂಟಾಗಿ ಕಲಹಪ್ರಾಪ್ತವಾಗುವುದು. ಯಾವಾಗಲೂ ಮನಸ್ಸು ಚಿಂತಾಕುಲವಾಗಿರುವುದು. ನಾನಾ ರೀತಿಯಿಂದ ವ್ಯರ್ಥವಾಗಿ ಧನವ್ಯಯವಾಗುವುದು. ಆದಕಾರಣ ಜಾಗರೂಕತೆಯಿಂದ ವರ್ತಿಸಿದರೆ ಈ ಆಪತ್ತುಗಳಿಗೆ ಸಿಲುಕದೆ ಪಾರಾಗಬಹುದು. ತಾ. 25 ರಿಂದ 27ರ ತನಕದ ದಿನಗಳು ಉತ್ತಮವಿರುವವು, ಇಷ್ಟಸಿದ್ಧಿ, ಸಂತೋಷ, ಸುಹೃಲ್ಲಾಭ.

**ಧನು:—**

ಎಲ್ಲಾ ಗ್ರಹರೂ ವಿಮುಖರಾಗಿದ್ದು ವಿವಿಧ ಅನಿಷ್ಟಗಳನ್ನು ಮಾಡಲು ಹವಣಿಸುತ್ತಿರುವುದರಿಂದ ಈ ವಾರವು ಈ ರಾಶಿಯವರಿಗೆ ಸಂಪೂರ್ಣ ಪ್ರತಿಕೂಲವು. ಅಂದರೆ ಇಷ್ಟು ಅನಿಷ್ಟಗಳು ಇನ್ನಿತರ ಯಾವ ರಾಶಿಯವರಿಗೂ ಸಂಭವಿಸುವಂತಿಲ್ಲ. ಚಿಂತೆಯಿಂದ ಬೆಂದ ಇವರ ದೇಹವು ಕಾಂತಿಹೀನವಾಗುವುದು. ಮತ್ತು ಶತ್ರುಗಳ ಪೀಡೆಯಿಂದಾಗಿ ಧನಕ್ಕೂ ಮಾನಕ್ಕೂ ಕೂಡ ಹಾನಿಯು ತಗಲುವುದು. ವಿಘ್ನಗಳಿಂದಾಗಿ ಯಾವ ಕಾರ್ಯವನ್ನೂ ಮುಂದರಿಸಲು ಸಾಧ್ಯವಿಲ್ಲವು. ಪ್ರತಿಯೊಂದು ಅಂಗಗಳಲ್ಲೂ ನೋವು ಕಾಣಬಹುದು. ಅಕಸ್ಮಾತ್ ಗಾಯಗಳಾಗುವುವು. ಉದ್ಯೋಗದಲ್ಲಿ ಬಹಳ ಕಷ್ಟಸಾಧ್ಯವಾದ ಆಪತ್ತು ಒದಗುವುದು. ಎಷ್ಟೊಂದು ಮಾತನಾಡುವುದಿಲ್ಲವೆಂದಿದ್ದರೂ ಜನರು ಕರೆದು ಕರೆದು ಜಗಳಮಾಡುವರು. ಎಲ್ಲೆಲ್ಲಿಯೂ ಅವಮಾನ ತಿರಸ್ಕಾರಗಳೇ ದೊರೆಯುವುವು. ಮನಸ್ಸು ಯಾವಾಗಲೂ ದುಷ್ಕಾರ್ಯದಲ್ಲೇ ಪ್ರವರ್ತಿಸುವುದು. ಮಿತ್ರ ಪುತ್ರ ಕಳತ್ರರಿಂದ ವಿಯೋಗವನ್ನು ಹೊಂದಿ ಚಂಚಲಚಿತ್ತನಾಗಿ ಭ್ರಾಂತನಂತೆ ತೋರುವನು. ಆದ ಕಾರಣ ಈ ರಾಶಿಯವರು ಅಗತ್ಯವಾಗಿ ದೇವತಾ

ಸ್ತೋತ್ರ ಮತ್ತು ಈ ದೋಷಗಳ ಶಾಂತಿ ರೂಪವಾದ ಕ್ರಿಯೆಗಳನ್ನು ಅವಶ್ಯ ಮಾಡಿಯೇ ತೀರಬೇಕು. ಇಲ್ಲದಲ್ಲಿ ಬಹಳ ಚಿಂತಾಜನಕವಾಗುವುದಿವರ ಜೀವನವು. ತಾ. 23 ರಿಂದ 26ರ ವರೆಗಿನ ದಿನಗಳು ಬಹಳ ಅನಿಷ್ಟಗಳಿವೆ.

**ಮಕರ:—**

ಇಷ್ಟಾನಿಷ್ಟ ಸ್ಥಾನಗತರಾದ ಗ್ರಹರು ಸಮಾನವಾಗಿರುವುದರಿಂದ ಎಲ್ಲಾ ಭಾಗದಲ್ಲೂ ಮಿಶ್ರ ಫಲಗಳೇ ಈ ರಾಶಿಯವಗೆ. ಬುಧ, ಗುರು, ಶುಕ್ರ, ಶನಿಗಳು ಇಷ್ಟ ಸ್ಥಾನಗತರಾಗಿರುವುದರಿಂದ ವ್ಯಾಪಾರಾದಿಗಳಲ್ಲಿ ಧನಲಾಭವಾಗುವುದು, ಶತ್ರುಗಳು ತಮ್ಮ ಶಕ್ತಿಹೀನರಾಗಿರುವ ಕಾರಣ ಅನಿಷ್ಟವನ್ನು ಮಾಡಲು ಸಮರ್ಥರಾಗುವುದಿಲ್ಲವು. ಧರ್ಮಸಂಬಂಧವಾದ ಕಾರ್ಯಗಳನ್ನೆ ಹೆಚ್ಚಾಗಿ ಮಾಡುವರು. ಸ್ತ್ರೀಸಂಬಂಧವಾದ ಸುಖವನ್ನು ಪಡೆಯುವರು. ಮತ್ತು ತಮಗಿಂತಲೂ ಸರ್ವವಿಧದಲ್ಲೂ ಪ್ರಬಲರಾದ ಶತ್ರುಗಳನ್ನು ಚತುರೋಪಾಯಗಳಿಂದ ಜಯಿಸಿ ತಮ್ಮವರನ್ನಾಗಿ ಮಾಡಿಕೊಳ್ಳುವ ವಿಶೇಷ ಶಕ್ತಿಯಿರುವುದು. ಆದರೂ ಅನಿಷ್ಟರಾದ ಗ್ರಹರಿಂದಾಗಿ ಕುಜ ಸಂಬಂಧಿಯಾದ ರೋಗವು ಕಂಡುಬಂದೀತು. ಕಣ್ಣು ನೋವೂ, ಕೈಹಿಡಿದಾಕೆಯೊಡನೆ ಕಲಹವೂ ಉಂಟಾಗುವುದು. ಅಲ್ಲಸಲ್ಲದ ಕಲಹದಿಂದಾಗಿ ಮಾನಹಾನಿಯಾಗುವ ಸಂಭವವು ಇದೆ. ತಾ. ೨೫.ರಿಂದ ೨೭ರ ವರೆಗಿನ ದಿನಗಳು ಸ್ವಲ್ಪ ಅನಿಷ್ಟಕಾರಕಗಳಾಗಿವೆ. ರಾಜಭಯ, ಅನಿಷ್ಟ, ಅಂತೂ ಶುಭಫಲವೇ ಸ್ವಲ್ಪ ಹೆಚ್ಚಿಗೆ ಫಲಿಸುವುದು.

**ಕುಂಭ:—**

ಈ ವ.ರವು ಇವರಿಗೆ ಉತ್ತಮವಲ್ಲವು. ಕಾರಣ ಇಷ್ಟಸ್ಥಾನಗತವಾದ ಕುಜ ಶುಕ್ರರು ಹಿಂದಿನ ಕಲಹ ನಿವೃತ್ತಿ, ಸಂಪತ್ತಿನಿಂದ ಕೂಡಿದ ಸ್ತ್ರೀಯ ಲಾಭ ಇತ್ಯಾದಿಗಳನ್ನು ಮಾಡಲು ಶಕ್ತರಿರುವರು. ಆದರೆ ಇತರ ಪ್ರತಿಕೂಲಗ್ರಹರಿಂದಾಗಿ ಆಕಸ್ಮಾತ್ ಪ್ರವಾಸಮಾಡಬೇಕಾದೀತು. ಪ್ರಕೃತಿಯು ಕೆಟ್ಟು ಉದರ ಸಂಬಂಧವಾದ ರೋಗವಾಗಲಿ, ಇತರ ಯಾವುದಾದರೂ ಶರೀರ ಪೀಡೆಗಳು ತಲೆದೋರುವವು. ವಿಜಾತೀಯರೊಡನೆ ಕಲಹವಾಗುವುದು. ಕೈಯ್ಯಲ್ಲಿರತಕ್ಕ ಹಣವು ವ್ಯರ್ಥವಾಗಿ ನಷ್ಟಹೊಂದುವುದರಿಂದ ಬುದ್ಧಿಗೆಟ್ಟು ಉನ್ಮತ್ತರಂತೆ ಕಾಣಬಹುದು. ದೈಹಿಕ ಸುಖವಾಗಲೀ ಮಾನಸಿಕ ಸುಖವಾಗಲೀ ಸ್ವಪ್ನದಲ್ಲಿ ಕೂಡ ಇಲ್ಲವು. ತಾ. ೨೧. ೨೨ ಮತ್ತು ೨೭ ಈ ದಿನ ಬಹಳ ಅನಿಷ್ಟದಾಯಕಗಳು. ಪ್ರವಾಸದಲ್ಲಿ ವಿಘ್ನಗಳು, ಶೋಕ, ಕಾರ್ಯಹಾನಿ.

**ಮೀನ:—**

ಮೇಲಿನ ರಾಶಿಯವರಿಗಿಂತಲೂ ನಿಮ್ಮ ಸ್ಥಿತಿಯು ಇನ್ನಷ್ಟು ಕೀಳುತರದ್ದಿರುವುದು. ರೋಗನಿವಾರಣೆಗಾಗಿಯೂ ಶತ್ರು ಪೀಡಾನಿವೃತ್ತಿಗಾಗಿಯೂ ಹಣವನ್ನು ವ್ಯಯಿಸಬೇಕಾಗುವುದು. ಮಾರ್ಗದಲ್ಲಿ ವಿವಿಧ ದುಃಖವನ್ನು ಹೊಂದುವಿರಿ. ಸ್ತ್ರೀಯಿಂದಾಗಿ ನಿಮಗೆ ಕೆಡುಕುಂಟಾಗುವುದಲ್ಲದೆ, ಅಶುಭ ಅನಿಷ್ಟಗಳೂ ಆಗಲಿವೆ. ಅಗ್ನಿ ಮತ್ತು ವಿಷ ಸಂಬಂಧಿಯಾದ ಭಯವು ಇರುವುದು. ಸ್ವಜನರಾದ ಬಂಧುಗಳು, ಆಪ್ತರು ಇವರೆಲ್ಲರೂ ಮನಸ್ತಾಪದಿಂದಾಗಿ ದೂರಾಗುವುದರಿಂದ ಮನಸ್ಸಿಗೊಂದು ಚಿಂತೆಯು ಅಂಟಿಕೊಳ್ಳುವುದು. ಮತ್ತು ಕೋರ್ಟುವ್ಯವಹಾರ ವ ಇತರ ಅನೀತಿಯ ಕಲಹದಿಂದಾಗಿ ಹಣವ್ಯಯವಾಗವುದು. ತಾ. ೨[illegible], ೨[illegible]. ಈ ದಿನಗಳು ಬಹಳ ಅನಿಷ್ಟಕಾರಕವಾಗಿರುವುದರಿಂದ, ಕಾರ್ಯನಾಶ, ವ್ಯಾಧಿಯ ಅಭಿವೃದ್ಧಿ, ದೈನ್ಯತ್ವಗಳು ಉಂಟಾಗುವವು.

—ಬಾಲಭಾಸ್ಕರ

---

ಪರ್ವತಾರೋಹಕ:—ಹಿಮಾಲಯದಲ್ಲಿ ಎಂತಹ ಶೀತವೆಂದರೆ ನಾವು ಉರಿಸಿದ ಮಯಣಬತ್ತಿಯನ್ನು ನಂದಿಸಲು ಕೂಡಾ ಕಷ್ಟವಾಯಿತು. ಬೆಂಕಿ ಕೂಡಾ ಹಿಮಗಡ್ಡೆಯಾಯಿತು.

ಇನ್ನೊಬ್ಬ:—ಅಷ್ಟೇ ಅಲ್ಲ. ನಾವು ಮಾತಾಡುವಾಗ ಶಬ್ದಗಳು ಐಸಿನಂತೆ ತುಂಡು ತುಂಡಾಗಿ ಹೊರಬಂದುವು! ನಾವು ಮಾತಾಡಿದುದನ್ನು ತಿಳಿಯಲು ಆ ತುಂಡುಗಳನ್ನು ಬಿಸಿಮಾಡಬೇಕಾಯಿತು!

---


ಶಾಂತಿ ಸಂಗ್ರಹಾಲಯ

ತ್ವರೆ ಮಾಡಿರಿ! ● ● ಒಮ್ಮೆ ಸಂದರ್ಶಿಸಿರಿ!!

ಜೀವಮಾನದೊಳಗಾದರೂ ಕುರಾಡಿ ಶಾಂತಿನಿಕೇತನ ಶಾಲೆಯ ವಸ್ತುಸಂಗ್ರಹಾಲಯುವನ್ನು ಒಮ್ಮೆ ಸಂದರ್ಶಿಸಿ ಜೀವನದ ದೃಷ್ಟಿಸಂಪತ್ತನ್ನು ಪಡೆಯಿರಿ.

# ಪಟಾಕಿ

‘ಊರು ಒಟ್ಟಾಗಬೇಕಾದರೆ ಹುಲಿ ನುಗ್ಗಬೇಕು’ ಎಂಬ ಗಾದೆಯಿದೆ. ಬಂಗಾಳದಲ್ಲಿ ಹಾಗೆಯೇ ಆಯಿತು.

XX XX

‘ನಾವು ಹುಲಿಗಳು, ಸಿಂಹಗಳು’ ಎಂದು ಅಲ್ಲಿಯ ಮುಖ್ಯಮಂತ್ರಿ ಮಾನ್ಯ ಫಜ್ಲುಲ್‌ಹಕ್ಕರು ಒಮ್ಮೆ ಘರ್ಜಿಸಿದ್ದರು.

XX XX

ಹೆಣ್ಣು ದಿನ ಹೋದಂತೆ ಗಂಡಾಗಿ ಮಾರ್ಪಟ್ಟ ದಾಖಲೆಗಳಿವೆ. ಮನುಷ್ಯನು ಮೃಗವಾದುದು ಚರಿತ್ರೆಯಲ್ಲಿ ಇದೇ ಮೊದಲು.

XX XX

ನರಸಿಂಹಾವತಾರದ ಕತೆ ನಾವು ಕೇಳಿದ್ದುಂಟು. ಆ ನರಸಿಂಹನ ಮುಖವಿಡೀ ಸಿಂಹದಾಕಾರ; ಈ ನರಸಿಂಹನ ನಾಲಿಗೆ ಮಾತ್ರ ಸಿಂಹ, ಹುಲಿ. ಯುಗ ಮಹಿಮೆ!

XX XX

ಮುಖ್ಯ ಮಂತ್ರಿ ‘ನಾವು ಹುಲಿಗಳು, ಸಿಂಹಗಳು’ ಎಂದೊಡನೆ ‘ನಾವೆಲ್ಲಾ ಆಡುಮರಿಗಳು, ದನದ ಕರುಗಳು’ ಎಂದು ಹೇಳುವದು ಮಿಕ್ಕವರ ಕರ್ತವ್ಯವಿತ್ತು.

XX XX

ಹಾಗೆ ಮಾಡುವ ಬದಲಿಗೆ ಅವರೆಲ್ಲರೂ ಒಟ್ಟಾಗಿ ಈ ಸಿಂಹ ಹುಲಿಗಳನ್ನು ಓಡಿಸಿ ಬಿಡುವ ಮನಸ್ಸು ಮಾಡಿದರು—ಅಂದರೆ ಮನುಷ್ಯರಾಗಿಯೇ ಉಳಿದರು.

XX XX

ಕಾಂಗ್ರೆಸ್ ಪಕ್ಷ, ಸ್ವತಂತ್ರ ಪಕ್ಷ, ಕೃಷಕ ಪಕ್ಷ, ಮೊದಲಾದ ಎಲ್ಲಾ ಪಕ್ಷಗಳು ಒಟ್ಟಾಗಿ ಮಂತ್ರಿಗಳ ಮೇಲೆ ಅವಿಶ್ವಾಸ ಠರಾವು ತಂದರು. ಹುಲಿಯು ಊರಲ್ಲಿ ಒಕ್ಕಟ್ಟು ಮಾಡುವದೆಂದರೆ ಹೀಗೆ.

XX XX

ಅವಿಶ್ವಾಸ ಸೂಚನೆಗಳೆಲ್ಲಾ ಬಿದ್ದು ಹೋದವು. ಈ ಸಂದರ್ಭದಲ್ಲಿ ಎಸೆಂಬ್ಲಿ ಗೃಹದ ಒಳಗೂ ಹೊರಗೂ ಜನರ ಗದ್ದಲವೇ ಗದ್ದಲ.

XX XX

ಹುಲಿ ಸಿಂಹಗಳು ನರಭಕ್ಷಕ ಜಾತಿಗೆ ಸೇರಿದವುಗಳಲ್ಲವೆಂಬುದಕ್ಕೆ ಇದೊಂದು ದೃಷ್ಟಾಂತ!

XX XX

ಜನರಿಂದ ಆರಿಸಲ್ಪಟ್ಟ ಮೆಂಬರರಲ್ಲಿ ಬಹು ಸಂಖ್ಯಾಕರು ಮಂತ್ರಿಗಳ ಮೇಲೆ ಅವಿಶ್ವಾಸ ಸೂಚಿಸಿದ್ದರು. ಯುರೋಪಿಯನ್ ಮೆಂಬರರ ವಿಶ್ವಾಸದ ಬಲದಿಂದ ಸರಕಾರವು ಗೆದ್ದಿತು.

XX XX

ಹಿಂದೀಯರಲ್ಲಿ ಯುರೋಪಿಯಾನರು ವಿಶ್ವಾಸವಿಡುವದಿಲ್ಲ ಎಂಬ ಕೂಗು ಇನ್ನಾದರೂ ನಿಲ್ಲಲಿ.

XX XX

ಮಂತ್ರಿಗಳ ವಿರುದ್ಧ ಪಕ್ಷದ ಮೆಂಬರರಿಗೆ ಪುಂಡರು ಗುಂಪು ಕೂಡಿ ಚೆನ್ನಾಗಿ ಹೊಡೆದು ಘಾಯಗೊಳಿಸಿದರು. ಹುಲಿ ಶಿಕಾರಿ ಮಾಡುವವರಿಗೆ ಈ ಅನುಭವವು ಹೊಸತಲ್ಲ.

XX XX

ವಿರುದ್ಧ ಪಕ್ಷದ ಕೆಲಮೆಂಬರರು ಪುಂಡರ ಭಯದಿಂದ ಎರಡು ರಾತ್ರಿಗಳನ್ನು ಎಸೆಂಬ್ಲಿ ಭವನದಲ್ಲಿಯೇ ಕಳೆಯಬೇಕಾಯಿತು. ಪುಂಡರಿಗೆ ಬಾಗಿಲು ಒಡೆದು ಒಳನುಗ್ಗುವ ತರಹ ದೊರೆಯದಿದ್ದುದು ಈ ಮೆಂಬರರ ಪುಣ್ಯ!

XX XX

ಮರದ ಕೆಲಸ ಮೊದಲಾದ ವಿಭಾಗಗಳಿರುವ ವಾರ್ಧಾ ವಿದ್ಯಾಯೋಜನೆಯನ್ನು ಜಾರಿಗೆ ತರುವ ಅಗತ್ಯವುಂಟೆಂಬುದು ಬಂಗಾಳ ಸರಕಾರಕ್ಕೆ ಈಗಲಾದರೂ ಮಂದಟ್ಟಾಗಿರಬಹುದು!

XX XX

ಸಾವಿರಗಟ್ಟಳೆ ಜನರು ಲಾಠಿ ಮೊದಲಾದುವುಗಳನ್ನು ಹಿಡಿದುಕೊಂಡು ಎಸೆಂಬ್ಲಿ ಭವನದಿದಿರು ಪ್ರದರ್ಶನ ನಡೆಸಿದರೂ, ಸರಕಾರವು ಎಳ್ಳಷ್ಟು ತಡೆಹಾಕಲಿಲ್ಲ. ಹೀಗಿದ್ದರೂ ಬಂಗಾಳ ಸರಕಾರವು ಜನರ ಅಭಿಪ್ರಾಯಕ್ಕೆ ವಿರುದ್ಧ ವರ್ತಿಸುತ್ತಿದೆ ಎನ್ನುವವರಿಗೆ ತಲೆಯಿದೆಯೆ?

XX XX

ಮೆಂಬರರೊಬ್ಬರಿಗೆ ಪುಂಡರಿಂದ ಪೆಟ್ಟು ಬಿದ್ದ ವರ್ತಮಾನ ಸಿಕ್ಕಿದೊಡನೆ ಮಿ. ಹಕ್ಕರು ಅಲ್ಲಿಗೆ ಬಂದು ವ್ಯಸನ ಸೂಚಿಸಿದರಂತೆ. ಅಗತ್ಯವಿರಲಿಲ್ಲ.

XX XX

ಮಾನ್ಯ ಹಕ್ಕರಿಗೆ ವ್ಯಸನವಾಗಿದೆಯೆಂಬ ಸಂಗತಿ ಎಲ್ಲರಿಗೂ ಗೊತ್ತು. ಆ ಹೊಡೆತವು ಕೂಡ, ಅವಿಶ್ವಾಸ ಠರಾವು ಬಂದುದರಿಂದ ಮಿ. ಹಕ್ಕರಿಗಾದ ವ್ಯಸನವನ್ನಲ್ಲದೆ ಮತ್ತಾವುದನ್ನೂ ಸೂಚಿಸುವದಿಲ್ಲ. ಹಕ್ಕರು ಮತ್ತೊಮ್ಮೆ ವ್ಯಸನ ಸೂಚಿಸುವ ಅಗತ್ಯವೇನಿತ್ತು?

XX XX

ಸಾವಿರಾರು ಪುಂಡರಿಗೆ ಮಾನ್ಯ ಹಕ್ಕರು ಬೇಕಾಗಿದ್ದಾರೆ. ಯುರೋಪಿಯಾನರಿಗೂ ಬೇಕಾಗಿದ್ದಾರೆ. ಮತ್ತೆ ಯಾರಿಗಾಗಿ ಹಕ್ಕರು ತನ್ನ ಹಕ್ಕನ್ನು ಕಳಕೊಳ್ಳಬೇಕು?

**ದೂಮ.**

# ಯು. ಆರ್ ಶಣೈ ಎಂಡ್ ಸನ್ಸ್.

ಹೆಡ್ ಆಫೀಸ್:- ರಥಬೀದಿ. ಬ್ರಾಂಚ್:- ಕೊಡಿಯಾಲಬೈಲ್.

ಮಂಗಳೂರು

ಎಲ್ಲಾ ತರದ ಶಾಲಾ ಕಾಲೇಜು ಪುಸ್ತಕಗಳು, ಸ್ಟೇಶನೆರಿ, ಕಟ್ಲೆರಿ,
ಪ್ರಿಂಟಿಂಗ್ ಶಾಯಿ ಮತ್ತು ಮದುವೆ ಉಪನಯನಾದಿಗಳಿಗೆ
ಬೇಕಾದ ಸುಗಂಧ ದ್ರವ್ಯ ಉಡುಗೆರೆ ವಗೈರೆಗಳು ಮತ್ತು
ಪ್ರಿಂಟಿಂಗ್ ಕಾಗದಗಳು ನಮ್ಮಲ್ಲಿ ಸುಲಭ
ದರದಲ್ಲಿ ಸಿಗುವುವು.

**For all kinds of School and College requisites, Books, Stationary Articles, Printing inks, and students everyday requisites:-**

## U. R. SHENOY & SONS,

***Car-Street, Mangalore,*** **Branch at Kodialbail.**

***BINDING IS OUR SPECIALITY.***



## BEST——CHEAP——AND RELIABLE.

Our 'M' Brand **PURE MUSK**, packed in 1/96th TOLA bottles, price Rs. 4—8—0 per dozen (F. O. R. any station) is a boon to humanity and can be used in all cases of emergency. Highly appreciated and recommended by Doctors, Hakims & Vaids.

Our **'M'** Brand **KASTURI PILLS** packed in bottles containing 300 Pills costing annas three (F. O. R. any station) is the best tonic of the day and is highly recommended in cases of impotency, nervous debility and all other diseases of heart weakness.

Our **KRISHANA BRAND HINGOO** packed in 3 tola packets costing 1-14-0 per dozen (F. O. R. any station) is best, fragrant for daily uses. Highly recommended by all who use it.

We also supply best Musk, Saffron, Silver and Gold leaves, Pachakarpur, Goulochin etc. Best Crystal SHILAJIT recommended by all Vaids, Doctors and guaranteed to be pure and best by all who have once used it, packed in beautiful packets of tola one each costing 0—8—0 per bottle F. O. R.

**ALL OTHER MEDICINAL ARTICLES AND JODI BATHIS CAN ALSO BE HAD. ONCE TRIED ALWAYS PATRONISED.**

***PLEASE ORDER ONCE AND OBLIGE.***

## S. D. METHA & CO., *(REGISTERED)*

**Purani Kanak Mandi, AMRITSAR.**

# ರಾಶಿಫಲ





: ಕತೆಗಾರರು :
ಶ್ರೀ. 'ಹರಿದಾಸ', ಮೂಲ್ಕಿ.

ಸಾಯಂಕಾಲ ೫|| ಗಂಟೆಯಾಗಿರಬಹುದು. ಆಫೀಸ್ ಕೆಲಸಗಳನ್ನು ಮಾಡಿ ಬಳಲಿದವನಾಗಿ, ಒಂದಿಷ್ಟು ಕಾಫಿ ಕುಡಿದು ದಣುವಾರಿಸಿಕೊಳ್ಳ ಬೇಕೆಂಬ ಕುತೂಹಲದಿಂದ ಬಹು ಬೇಗನೇ ಮನೆಯನ್ನು ಸೇರಿದೆನು. ನನ್ನನ್ನೇ ನಿರೀಕ್ಷಿಸುತ್ತ ಬಾಗಿಲ ಬಳಿ ನಿಂತಿದ್ದ ಸರಲೆಯು, ನಾನು ಬರಿಗೈಯಲ್ಲಿ ಬರುತ್ತಿದ್ದುದನ್ನು ನೋಡಿ 'ಪೇಪರ್ ತರಲಿಲ್ಲವೇ?' ಎಂದು ಪ್ರಶ್ನಿಸಿದಳು. ರಾಶಿಫಲವನ್ನೋದಿ ತನ್ನ ಭಾವೀಜೀವನ ನಡೆಸ ಬೇಕೆಂದಿದ್ದ ಸರಲೆಯು ನನ್ನೊಡನೆ ಪ್ರತಿಯೊಂದು ಪೇಪರನ್ನೂ ತರಬೇಕೆಂದು ಮೊದಲೇ ಹೇಳಿದ್ದಳು. ಆರ್ಥಿಕ ದುಸ್ಥಿತಿಯ ಇಂಥಾ ಸಮಯದಲ್ಲಿ ಹಾಗೆಲ್ಲಾ ಹಣ ಖರ್ಚು ಮಾಡುವುದಕ್ಕೆ ಹಿಂಜರಿಯುತ್ತಿದ್ದ ನಾನು, ಅವಳ ಹತ್ತು ಬಾರಿಯ ಕಾಂಕ್ಷೆಗಳನ್ನು ಒಂದಾಣೆಯ ಪೇಪರನ್ನೊಂದುಬಾರಿ ಕೊಟ್ಟು ಪೂರೈಸುತ್ತಿದ್ದೆನು. ಈ ದಿನ ಅವಳಿಗೆ ರಾಶಿಫಲವನ್ನು ನೋಡುವ ಕುತೂಹಲವು ಬಹಳವಾಗಿರಬೇಕು. ಅಂತೆಯೇ, ನನ್ನ ನಿರೀಕ್ಷೆ ಮಾಡುತ್ತಿದ್ದು ಹಾಗೆ ಪ್ರಶ್ನಿಸಿದಳು. ನಾನಾದರೋ ಕಾಫಿ ಕುಡಿದು ವಾಕಿಂಗ್ ಹೋಗ ಬೇಕೆಂಬ ವಿಚಾರ ವನ್ನೇ ತಲೆಯಲ್ಲಿಟ್ಟುಕೊಂಡಿದ್ದೆನಾದುದರಿಂದ ಪೇಪರಿನ ವಿಚಾರ ಮರೆತಿದ್ದೆನು. ಈಗ ಈಕೆಯ ಬಾಯಿಯಿಂದೊಮ್ಮೆ ಬಿಡುಗಡೆ ಹೊಂದುವಾ ಎಂದು 'ಮೊದಲು ಕಾಫಿ ತಾ' ಎಂದೆ. 'ಮೊದಲು ನನ್ನ ಪ್ರಶ್ನೆಗೆ ಉತ್ತರ ಕೊಡಿರಿ. ಈಗೆಂಟು ದಿನಗಳಿಂದಲೂ ನಿಮ್ಮೊಡನೆ ಹೇಳುತ್ತಿದ್ದೇನೆ. ಆದರೂ, ಒಂದೇ ಒಂದು ಪೇಪರ್ ತರಲಿಲ್ಲ.' ಎಂದು ಸ್ವಲ್ಪ ಸಿಡುಕಿನಿಂದ ಹೇಳಿದಳು. ನನಗೂ ಸ್ವಲ್ಪ ಸಿಟ್ಟು ಬಂದಿತ್ತು. 'ಏನು ಉದ್ಧಟತನವೇ? ಆಫೀಸ್ ಕೆಲಸ ಮಾಡಿ ಬಳಲಿದ ನನಗೆ ಕಾಫಿ ಕುಡಿಯುವ ಆಸೆಯು ಹೆಚ್ಚಾಗಿ, ನೆಟ್ಟಗೆ ಬಂದೆನು. ಈಗದರಿಂದ ಉಂಟಾದ ನಷ್ಟವೇನು?' ಎಂದೆ. ಇದರಿಂದೇನೂ ಪ್ರಯೋಜನ ವಾಗಲಿಕ್ಕಿಲ್ಲವೆಂದು ಮೊದಲೇ ತಿಳಿದಿದ್ದೆನಾದರೂ ಆಕೆ ಯನ್ನೊಮ್ಮೆ ಮಾತಿನ ಜಾಣತನದಿಂದ ಸೋಲಿಸ ಬೇಕೆಂದಿದ್ದ ಹಟಕ್ಕಾಗಿ ಮಾತ್ರ ಆ ರೀತಿ ವಾದಿಸಿದೆನು. ನಾನು ತಿಳಿದಂತೇ ಆಕೆಯು ನನ್ನ ಮಾತನ್ನು ತಿರಸ್ಕರಿಸಿ 'ಪತ್ರಿಕೆ ತರದೆ ಕಾಫಿ ಕೊಡಲಾರೆ,' ಎಂಬ ಸಿದ್ಧಾಂತ ವನ್ನು ಹೇಳಿದಳು. ಸಾಲದುದಕ್ಕೆ 'ನಾಸ್ತಿಕರು ನೀವು. ರಾಶಿಫಲ ವಿಚಾರವನ್ನಲ್ಲಗಳೆಯುತ್ತೀರಿ. ಭಾವೀ ಜೀವನ ವಿಚಾರವನ್ನು ಸೂಚಿಸುವ ಮಹದ್ವಿಚಾರವನ್ನೊಳಗೊಂಡ ಆ ಪತ್ರಿಕೆಯನ್ನು ನನಗಾಗಿ ೧ ಆಣೆ ತೆತ್ತು ತರುವ ಬುದ್ಧಿಯು ನಿಮಗಾಗಲಿಲ್ಲ. ಮೇಲಾಗಿ ನನ್ನನ್ನೇ ಮೂದಲಿಸುವಿರಲ್ಲ!' ಎಂಬ ಮಾತಿನ ಸುರಿಮಳೆ ಸುರಿಸಿ ದಿಟ್ಟತನದಿಂದೆದ್ದು ಹೋಗಿ ಬಿಟ್ಟಳು. ಕಾಫಿ ತರಲು ಹೋಗಿರಬಹುದೆಂದು ಎಣಿಸಿ ಒಂದು ಗಳಿಗೆ ಅವಳ ದಾರಿಯನ್ನೇ ನಿರೀಕ್ಷಿಸುತ್ತಿದ್ದೆ. ಹಿಂದಿರುಗಲಿಲ್ಲಾಕೆ. ಇನ್ನು ಗೌರವವನು ಕಾಯು ಹೋಗಿ ಗಂಟಲೊಣಗಿ ಸುವದೊಳಿತಲ್ಲವೆಂದು, ಅಡಿಗೆ ಮನೆಗೆ ಹೊಕ್ಕೆನು. ಸರಲೆಯಲ್ಲಿಯೂ ಇಲ್ಲ. ಒಲೆಯಲ್ಲಿ ಕಾಫಿ ಕುದಿಯುತ್ತಿತ್ತು. ಆಕೆ ಬರುವ ಮೊದಲಾಗಿ ಕಾಫಿ ಕುಡಿದು ಗೊತ್ತಿಲ್ಲದವನಂತೆ ನನ್ನ ದಾರಿ ಹಿಡಿಯಬೇಕೆಂದೆಣಿಸಿ ಒಂದು ಲೋಟದಲ್ಲಿ ಕಾಫಿ ಬಗ್ಗಿಸಲನುವಾದೆ. ಇಲ್ಲದ ಉಸಾಬರಿ ಮಾಡ ಹೋದುದರ ಪರಿಣಾಮವೋ ಎಂಬಂತೆ, ಬಿಸಿ ಹಿಡಿದು ಪರಿಪಾಠವಿಲ್ಲದ ನಾನು ಕಾಫಿ ಯನ್ನು ಕಾಲ ಮೇಲೆ ಚೆಲ್ಲಿಕೊಂಡು ದೊಡ್ಡ ಗಲಾಟೆ ಗಾಸ್ಪದ ಮಾಡಿದೆನು. ಇದೆಲ್ಲವನ್ನೂ ಆಗ ತಾನೇ ಹೊರಗಿನಿಂದ ಬಂದು ಬಾಗಿಲ ಬಳಿನಿಂತು ನೋಡುತ್ತಿದ್ದ ಸರಲೆಯು ತಡೆಯಲಾರದ ನಗುವಿನೊಡನೆ, 'ಕಾಫಿ ಕುಡಿದಾಯಿತೇ' ಎಂದು ಹಾಸ್ಯ ಮಾಡಿದಳು. ನಾಚಿಕೆ, ಸಿಟ್ಟು, ಬೇಸರ ಎಲ್ಲವೂ ನನ್ನಲ್ಲುಂಟಾಯಿತು. 'ಗಂಡುಬೀರಿ ಹೆಂಗಸು' ಎಂದು ಉರಿಮುಖದಿಂದ ಹೇಳುತ್ತ ಕಾಫಿಲೋಟವನ್ನಲ್ಲೇ ಬಿಟ್ಟು, ನನ್ನ ಕೋಣೆಗೆ ಹೋಗಿ ಇಸೀಚೆಯರ್‌ನಲ್ಲಿ ಬಿದ್ದುಕೊಂಡು ಉರಿಯುತ್ತಿದ್ದ ಕಾಲಿನ ಶುಶ್ರೂಷೆ ಮಾಡತೊಡಗಿದೆ. ಅಷ್ಟರಲ್ಲಿ ಸರಲೆಯು ಒಂದು ಕಪ್ ಕಾಫಿ ಹಿಡಿದುಕೊಂಡು ಬಂದು

ಮುಗುಳು ನಗುತ್ತ 'ತೆಗೊಳ್ಳೀಂದ್ರೆ, ಇಲ್ಲದ ಕಾರಭಾರ ನಡಿಸ ಹೋಗುವವರ ಹಣೇಬರಹವೇ ಹೀಗೆ' ಎಂದು ಹಂಗಿಸಿ, ಲೋಟಾವನ್ನು ಮೇಜಿನ ಮೇಲಿಟ್ಟಳು. ಹೇಗೂ ಇರಲಿ, ಕಾಫಿಸಿಕ್ಕಿತಲ್ಲಾ ಎಂಬಾನಂದದಿಂದ ಅವಳ ಎಲ್ಲಾ ವ್ಯತಿರಿಕ್ತತೆಯನ್ನು ಸಹಿಸಿ, ಸರಸರನೆ ಕಾಫಿಕುಡಿದು ಹವಾ ತಿನ್ನಲಿಕ್ಕಾಗಿ ಹೊರಟೆ. 'ಬರುವಾಗ ಪೇಪರ್ ತರಲು ಮರೆಯಬೇಡಿರಿ,' ಎಂದಳು ಸರಲೆ.



""ನನ್ನನ್ನೇ ನಿರೀಕ್ಷಿಸಿ ಬಾಗಿಲ ಬಳಿ ನಿಂತಿದ್ದ ಸರಲೆಯು, ನಾನು ಬರಿಗೈಯ್ಯಲ್ಲಿ ಬಂದುದನ್ನು ನೋಡಿ "ಪೇಪರ್ ತರಲಿಲ್ಲವೆ?" ಎಂದು ಪ್ರಶ್ನಿಸಿದಳು.

ಗಂಭೀರತೆಯನ್ನು ಧರಿಸಿದ್ದ ನಾನು ಹುಂಕಾರ ಮಾತ್ರ ದಿಂದ ಸಮ್ಮತಿಯನ್ನು ಸೂಚಿಸಿ ಹೊರಬಿದ್ದೆನು.

೦ ೦ ೦ ೦

'ನೋಡಿದಿರಾ? ಜೇಷ್ಠಾ ನಕ್ಷತ್ರದವರಿಗೆ ಬೆಂಕಿಯ ಭಯವಿದೆ-ಎಂದಿದೆ ಇದರಲ್ಲಿ. ಅಂತೆಯೇ ಸಾಯಂಕಾಲ ನಿಮಗಾರೀತಿ ಅವಘಡ ಸಂಭವಿಸಿತು. ಹೆ! ಈ ರಾಶಿ ಫಲ ಬರಿಯುವವರ ತಲೆ ಸಾಮಾನ್ಯವಲ್ಲಪ್ಪ' ಎಂದು ಪೇಪರನ್ನೋದುತ್ತಿದ್ದ ಸರಲೆಯು ತಾನಾಗಿ ಮಾತನಾಡ ತೊಡಗಿದಳು. ನಾನು ಒಂದಾಣೆ ನಷ್ಟ ಮಾಡಿದೆನಲ್ಲಾ ಎಂಬ ಬೇಸರದಿಂದ 'ಅವರ ತಲೆ ಸಾಮಾನ್ಯವಲ್ಲ, ಆದರೆ ಅದಕ್ಕೆ ಮರುಳಾಗಿ ಒಂದೊಂದಾಣೆ ಹಾಳು ಮಾಡುವ ನಮ್ಮ ತಲೆ ಮಾತ್ರ ವ್ಯರ್ಥ' ಎಂದುತ್ತರ ವಿತ್ತೆನು. ಈ ಮಾತು ಅವಳಿಗೆ ರುಚಿಸಲಿಲ್ಲ. ಕಾರಣ, ಸಿಡುಕುಗೊಂಡು 'ನೀವು ನಾಸ್ತಿಕರು, ದೈವ, ದೇವರು, ಶಾಸ್ತ್ರ, ಪುರಾಣ, ಯಾವುದರಲ್ಲೂ ವಿಶ್ವಾಸವಿಲ್ಲ ನಿಮಗೆ.' ಎಂದು ನನ್ನನ್ನು ಅಪರಾಧಿಯನ್ನಾಗಿ ಮಾಡಿದಳು. ಒಂದಾಣೆ ನಷ್ಟ ಪಡಿಸಿಕೊಂಡರೂ, ಕಾಲಮೇಲೆ ಬಿಸಿ ಕಾಫಿ ಹಾಕಿಕೊಂಡು ಫಜೀತಿಗೊಳಗಾದರೂ ಸುಖ ವಿದೆಯೇ? ಈ ವಾಕ್ಪ್ರಹರಗಳು ಬೇರೆ. ತಲೆ ಬಿಸಿಯೇರಿತು. ಅವಳ ಕಡೆಗೆ ವಕ್ರದೃಷ್ಟಿಯಿಂದ ನೋಡುತ್ತ 'ನಿನ್ನಂಥ ಆಸ್ತಿಕರಿಂದಲೇ ಈ ಪೇಪರಿನ ಜೀವನ ನಡೆದಿದೆ.' ಎಂದು ಹಂಗಿಸಿ ಬೇರೆ ಕಡೆ ಮುಖಮಾಡಿ ಓದತೊಡಗಿದೆನು. ಕ್ಷಣಹೊತ್ತು ಕೊಠಡಿ ನಿಶ್ಶಬ್ದವಾಗಿತ್ತು. ಪುನಃ ಸರಲೆಯು, 'ನೋಡೀಂದ್ರೆ, ವೃಶ್ಚಿಕ ರಾಶಿಯವರಿಗೆ ಧನ ಲಾಭಯೋಗವಿದೆಯಂತೆ.' ಎಂದಾತುರದಿಂದ ತಾನು ರಾಶಿಫಲ ನೋಡಿದುದರ ಪ್ರತಿಫಲ ಸಿಕ್ಕಿತೆಂಬ ವಿಜಯ ವನ್ನು ಸೂಚಿಸುವ ದೃಷ್ಟಿಯಿಂದ ನನ್ನೆಡೆಗೆ ನೋಡಿ ದಳು. ಮತ್ತೂ ನನ್ನ ಓದುವಿಕೆಗೆ ವ್ಯರ್ಥ ಅಡ್ಡಿಮಾಡು ತ್ತಿರುವಳಲ್ಲಾ ಎಂಬ ಬೇಸರದಿಂದ 'ಹಾಗಾದರೆ ನೀನು ನಿಜವಾಗಿ ಆಸ್ತಿಕಳಾಗುವೆ.' ಎಂದು ನಂಜು ಕಾರಿದೆನು. ಇದನ್ನಾವುದನ್ನೂ ಅವಳು ಲಕ್ಷಿಸಿಲ್ಲ. ಅಂತೆಯೇ 'ನೀವು ಹಾಗೆಲ್ಲಾ ವಿಷಕಾರಬಾರದು. ದೈವಾನುಕೂಲವಿದೆ ನಮಗೀಗ. ನಾಳೆ ನನ್ನ ಹೆಸರಲ್ಲಿ ಒಂದು ಗೋವಾ ಲಾಟರಿ ಟಿಕೇಟು ಪಡೆಯಬೇಕು ಎಂದಳು. ನನ್ನ ತಲೆಗೆ ತಣ್ಣೀರು ಹೊಯ್ದಂತಾಯಿತು. ಒಂದಾಣೆಯ ಪೇಪರಲ್ಲಿ ಹೋಗುತ್ತಿದ್ದ ನನ್ನ ಗ್ರಹಚಾರವು ಈಗ ೫ ರೂಪ್ಯಾಗಳಿಗೆ ಚಕ್ರಕೊಡಲನುವಾಯಿತಲ್ಲಾ ಎಂದು ಚಿಂತೆ ಹತ್ತಿತು. ಇನ್ನು ಸುಮ್ಮನಿದ್ದರೆ ಒಳಿತಾಗದೆಂದು ತಿಳಿದು ನನಗೆ ಬಂದಿದ್ದ ಎಲ್ಲಾ, ಸಿಟ್ಟು, ತಿರಸ್ಕಾರ, ನಂಜು ಮೊದಲಾದವುಗಳನ್ನು ಬಿಟ್ಟು ಆಕೆಯ ಬಳಿ ಕುಳಿತು 'ಸರಲಾ, ಅದೆಲ್ಲಾ ಆಗುವ ಹೋಗುವ ಸಂಚಾತಿಕೆಯಲ್ಲ. ಹಾಗೆಲ್ಲಾ ದುಡ್ಡುಸಿಗುವುದು ಖಂಡಿತ ವೆಂದಾಗಿದ್ದರೆ ದೇಶದಲ್ಲಿ ದರಿದ್ರರೇ ಇರುತ್ತಿದ್ದಿಲ್ಲ. ವ್ಯರ್ಥ ಹುಚ್ಚು ಕಟ್ಟಬೇಡ' ಎಂದು ಸಮಾಧಾನಿಸಿದೆನು. ಆದರೆ ಹಠಯೋಗಿನಿಯಾದ ಆಕೆಯ ನಿರ್ಧಾರವನ್ನು ತಿರುಗಿಸುವುದಸಾಧ್ಯವಾಯಿತು. ಪರಿಣಾಮರೂಪವಾಗಿ ಮಾರಣೆಯ ದಿನವೇ ನನಗೆ ೫ ರೂಪ್ಯಾಗೆ 'ಚಕ್ಕರ್' ಬಂದಿತೆಂದು ಬೇರೆ ಹೇಳ ಬೇಕಾಗಿಲ್ಲ.

೦ ೦ ೦ ೦

ತಿಂಗಳೊಂದು ದಾಟಿತು. ಸರಲೆಗೆ ಪ್ರತಿ ದಿನವೂ ಟಪ್ಪಾಲ್ ಪೇದೆಯೊಡನೆ ತಂತಿ ಇದೆಯೆ ಎಂದು ಕೇಳುವ ಕೆಲಸ. ಅಂದು ಆದಿತ್ಯವಾರ, ರಜಾದಿನವಾದುದರಿಂದ ಮನೆಯಲ್ಲೇ ಇದ್ದೆ. ಟಪ್ಪಾಲ್ ಪೇದೆಯು ಒಂದು ಬುಕ್‌ಪೋಸ್ಟ್ ಕೊಟ್ಟು ಹೋದನು. ಒಳಗಿದ್ದ ನನ್ನ ಸರಲೆಯು ಓಡಿ ಬಂದು, 'ಎಷ್ಟನೇ ಪ್ರೈಜ್ ನಮಗೆ?' ಎಂದಾತುರದ ಪರಮಾವಧಿಗೊಂಡು ಕೇಳಿದಳು. ಡ್ರಾವರ್‌ನಿಂದ ಟಿಕೇಟ್ ನಂಬರ್ಸ್‌ಗಳನ್ನು ತೆಗೆದು ನೋಡಿ ಲಿಸ್ಟಿನಲ್ಲಿ ಹುಡುಕಾಡಿದೆ. ದೊಡ್ಡ ಕಣ್ಣು ಮಾಡಿಕೊಂಡು ಸರಲೆ ನಿಂತಿದ್ದಳು. ಪುಣ್ಯ! ನಮ್ಮ ಟಿಕೇಟುಗಳ ನಂಬ್ರವೇ ಇಲ್ಲ. ಬೇಸರದಿಂದ ಲಿಸ್ಟನ್ನು ತೆಗೆದು ಬಿಸಾಡಿದೆನು. ನಿರಾಶೆಯನ್ನು ತಿಳಿದ ಸರಲೆಯು ಸಣ್ಣ ಮುಖಮಾಡಿ 'ಲಾಟರೀ ಮ್ಯಾನೇಜರನಿಗೆ ತಲೆ ಸರಿಯಿಲ್ಲ' ಎಂದಳು. 'ನಿನಗೆ ಮೆದುಳಿಲ್ಲ. ಅಲ್ಲದಿರುವಲ್ಲಿ—' ಹಣ ಹೋದ ಬೇಸರದಿಂದಾಗಿ ಇನ್ನೂ ಏನೋ ಹೇಳಬೇಕೆಂದಿದ್ದೆನು. ಅಷ್ಟರಲ್ಲೇ ಆಕೆಯು 'ನಿಮ್ಮ ನಾಸ್ತಿಕ ಬುದ್ಧಿಯ ಪರಿಣಾಮವಿದು.' ಎಂದು ನನ್ನ ಮೇಲೆಯೇ ಅಪವಾದವನ್ನು ಹೊರಿಸಿದಳು. ಮತ್ತೂ ವಾಕ್ಪ್ರಹರ, ನನ್ನದೇ ತಪ್ಪು. ಸಹಿಸಲಾರದವನಾಗಿ 'ಸ್ತ್ರೀಗೆ ಹೆಚ್ಚಿಗೆ ಸಲಿಗೆಯಿತ್ತುದು ದೊಡ್ಡ ತಪ್ಪು. ಅಲ್ಲದಿದ್ದರೆ ೫ ರೂಪಾಯಿ ಉಳಿಯುತ್ತಿತ್ತು' ಎಂದೆ. ಆಕೆ ಉಗ್ರರೂಪಿಯಾದಳು. ಕಪೋಲಗಳು ಕೆಂಪೇರಿದುವು. 'ನಿಷ್ಠೂರ ಹೃದಯದವರು ಗಂಡಸರು ಎಂದು ಕಿರಿಚಿದಳು. 'ಹೆಂಡತಿಯ ಸ್ವೇಚ್ಛಾಪ್ರವೃತ್ತನೆಗಾಸ್ಪದ ಕೊಡುವವರು ನಿಷ್ಠೂರರೇ ಸರಿ' ಎಂದು ನಾನೂ ಧೈರ್ಯದಿಂದ ಉತ್ತರಿಸಿದೆ. ಪ್ರತಿಮಾತನ್ನು ಸೈರಿಸದ ಆಕೆಯು 'ಎಷ್ಟಾದರೂ ನಾಸ್ತಿಕರು ನೀವು' ಎಂದಳು. ಹೆಂಡತಿಯೊಡನೆ ಮಾತಿನಿಂದ ಸೋತೆನೆಂಬ ಅಪವಾದ ಭೀರುವಾಗಿ 'ಆಸ್ತಿಕನಾಗಿ ೫ ರೂಪಾಯಿ ಕಳಕೊಂಡು ಹಾಲಿನವರ ಬಾಯಿಗೆ ಬಿದ್ದುದು ಸಾಕು. ನಾಸ್ತಿಕನಾದರೂ ಅಡ್ಡಿಯಿಲ್ಲ' ಎಂಬ ನಂಜು ಕಾರಿದೆ. ಇನ್ನು ಮಾತಾಡಲೆಡೆಯಿದ್ದಿಲ್ಲ. ಕಾರಣ, ನನ್ನನ್ನು ಮೂಕನನ್ನಾಗಿರಿಸುವ ಒಂದೇ ಒಂದು ತೊಟ್ಟು ಕಣ್ಣೀರಿನಿಂದ ನನ್ನನ್ನು ತಡೆದು ಬಿಟ್ಟಳು ಸರಲೆ. ರಾತ್ರಿ ಬಹಳವಾಯಿತು, ಮಲಗಿರಿ-ಎಂಬ ಸೂಚನೆಯನ್ನು ಕೊಡುತ್ತ ಗ್ಲಾಡಿಯು (ನನ್ನ ಪ್ರೀತಿಯ ನಾಯಿ) ಬೊಗಳತೊಡಗಿತು. ಗಡಿಯಾರವೂ ೧೦ ಬಡೆಯಿತು. ಸರಲೆಯನ್ನು ಹಿಡಿದೆಳೆದಾಲಂಗಿಸಿ ಅವಳ ಕೋಪವನ್ನು ಶಾಂತಗೊಳಿಸಲು ಪ್ರಯತ್ನ ಪಡತೊಡಗಿದೆನು.


Rs. 75 • WILL PAY YOU AFTER 5 YEARS • Rs. 100

INDUSTRIAL CASH CERTIFICATES

FOR FULL PARTICULARS APPLY TO—
SUPPLY AGENCY LTD., UDIPI

ಶಾಂತಿ ಸಮಸ್ಯೆ

ಇಂದೇ ಬರೆಯಿರಿ!  ಬಂದೇ ಬರುವುದು!!

 ಅಪಾರದ್ರವ್ಯ!!! 

ಪ್ರತಿ ತಿಂಗಳೂ ಪ್ರಯತ್ನದಿಂದ ಶಾಂತಿ ಸಮಸ್ಯೆಗಳನ್ನು ತಪ್ಪದೆ ಬಿಡಿಸಿರಿ.

ಶಾಂತಿ ಸರ್ವಿಸ್, ಕುರಾಡಿ
ಬ್ರಹ್ಮಾವರ ಪೋಸ್ಟ್ (ದ. ಕನ್ನಡ.)



# ಸಂಕುಚಿತ ಭಾರತ



ಹಿಂದೂ ಮಹಾಸಭೆಯ ಅಧ್ಯಕ್ಷರು ಪರದೇಶಗಳಿಗೆ ಹೋಗಿ ಭಾರತದ ವಿದೇಶ ಧೋರಣೆಯು ಪಂಡಿತ ನೆಹರುಗಳನ್ನುವಂತಿಲ್ಲ. ಅದು ಹೀಗಿದೆ....ಯೆಂದು ಭಾಷಣ ಮಾಡುವರಂತೆ.

. ∴ .

ಮುಸ್ಲಿಮ್ ಲೀಗಿನ ಧ್ವಜವು ಮಹಮ್ಮದ್ ಪೈಗಂಬರರ ಕಾಲದ್ದಲ್ಲವೆಂದು ಮಿ! ಜಿನ್ನರವರು ನಿರಾಕರಿಸಿದರೂ, ಅದು ಬಹಳ ಪ್ರಾಚೀನಕಾಲದ್ದು ಎಂದು ಹೇಳಿದ್ದಾರೆ. ಚರಿತ್ರೆಯ ಸಂಶೋಧಕರು ಘಜನಿ ಮುಹಮ್ಮದನ ಕಾಲದಲ್ಲಿ ಮುಸ್ಲಿಮ್‌ಲೀಗಿನ ಧ್ವಜವಿದ್ದಿರಬಹುದೇ ಎಂದು ಶೋಧಗಳನ್ನು ಮಾಡುತ್ತಿದ್ದಾರೆ.

. ∴ .

ಬಂಗಾಳದ ಸಿಂಹಗಳನ್ನೂ ಹುಲಿಗಳನ್ನೂ ವಿರೋಧಪಕ್ಷದವರು ಓಡಿಸಲಾರಂಭಿಸಿದ್ದಾರೆ. ಅಲ್ಲಿಯ ಹುಲಿ ಸಿಂಹಗಳು ಘರ್ಜಿಸುತ್ತಿವೆ. ಅವುಗಳನ್ನು ಮಂತ್ರಿಮಂಡಲದ ಗೂಡಿನಿಂದ ಹೊರಗೆ ಮಾಡಿದರೆ ಬಂಗಾ "ನರಭಕ್ಷಕ"ರಾಗಿ ಪರಿಣಮಿಸಬಹುದೆಂದು ಬಂಗಾಳದವರು ಕೋವಿ ಲೈಸನ್ಸಿಗೆ ಅರ್ಜಿ ಹಾಕಿದ್ದಾರಂತೆ.

. ∴ .

ಕೇಂದ್ರವಿಧಾಯಕ ಸಭೆಯ ಲೀಡರರಾದ ಸರ್. ಮುಹಮ್ಮದ್ ಝುಫ್ರುಲ್ಲಾಖಾನರು ಆಂಗ್ಲೋ-ಭಾರತ ವ್ಯಾಪಾರ ಒಪ್ಪಂದದ ಸುಸ್ಪಷ್ಟ ಯೋಜನೆಯನ್ನು ತಯಾರಿಸುತ್ತಿದ್ದಾರಂತೆ. ಅಷ್ಟು ಸ್ಪಷ್ಟವಾದ ಯೋಜನೆಯಾದುದರಿಂದಲೇ ಅವರದನ್ನು ಹೇಳಲೊಪ್ಪುವುದಿಲ್ಲ.

---

## ಪ್ರಕಟಣೆ

ಉಡ್ಪಿ ತಾಲೂಕು ಶಿವಳ್ಳಿ ಕಸಬಾ ಗ್ರಾಮದ ಕುಂಜಿಬೆಟ್ಟನಲ್ಲಿರುವ ಕಾರಂತ ವೆಂಕಟಕೃಷ್ಣ ಭಟ್ಟರ ಮಗ ವಿಠಲ ಭಟ್ರಿಗೆ—ಓವರ್ಸಿಯರ್ ದಾಸಪ್ಪಯ್ಯನವರ ಮಗ ಉಡ್ಪಿ ಕಸಬಾ ಪಡುಪೇಟೆಯಲ್ಲಿರುವ ಟೆಲಿಗ್ರಾಮು ಬಟ್ವಾಡೆ ಪೇದೆ ಕೆ. ಭೋಜರಾಯರು ತಾ. ೨-೨-೧೯೩೮ರಲ್ಲಿ ರೂಪಾಯಿ ೧೦೦—೦—೦ಕ್ಕೆ ಬರಕೊಟ್ಟ ಡಿಮಾಂಡ್ ನೋಟು ಇತ್ತಲಾಗಿ ಕಾಣೆಯಾಗಿಯದೆ. ಇನ್ನು ಅದು ಯಾರಿಗೆ ಸಿಕ್ಕಿ ಅವರು ಫೋರ್ಜರಿ ಟ್ರಾನ್ಸ್‌ಫರ್ ಕೊಟ್ಟಲ್ಲಿ ಟ್ರಾನ್ಸ್‌ಫರ್ ಪಡಕೊಂಡದ್ದಾದರೆ ಅಥವಾ ನೋಟು ಬರ್ಸಿ ಕೊಟ್ಟವರು ಸದ್ರಿ ನೋಟಿನ ಹಣ ಪಾವ್ತಿಮಾಡಿ ಫೋರ್ಜರಿ ಶರಾನಿಶಿ ನೋಟು ವಾಪಾಸು ಪಡದದ್ದಾದರೆ ಅಂಥವುಗಳೆಲ್ಲಾ ನನ್ನ ಮೇಲೆ ಶಿಂಧಾಗಲಾರದು ಎಂಬ ಸಂಗ್ತಿ ಈ ಮೂಲಕ ತಿಳಿಸಿದ್ದೇನೆ.

**ಕಾರಂತ ವಿಟ್ಲ ಭಟ್ಟನ ರುಜು.**

**Advertise - in - Antaranga**

## ಶುಭಾಕಾಂಕ್ಷೆ

**ಜ**-ಗದೊಳನುಪಮ ರೂಪಗುಣನಿಧಿ—|
**ಯ**-ಸಮ ವಿಷಯವ ಬೋಧಿಸುತ ಖಳ—|
**ಅಂ**-ತರಂಗವನರಿತು ವಿಶ್ವದ ಮಾಯ ಜಾಲಗಳ||
**ತ**-ತ್ತ್ವವನು ಮನಕರುಹಿ ನೈಜದೆ|
**ರಂ**-ಜಿಸುತ ಸಂತಸದಿ ಸುಜನರ|
**ಗ**-ತಿಯೊಳುತ್ತಮ ಪಥದಿ ಮೆರೆಯಲಿ! ಅಂತರಂಗವು ತಾಂ||

**ನಾರಾವಿ ಚಂದ್ರರಾಜೇಂದ್ರ**
**ಧರ್ಮಸ್ಥಳ.**

---

 **ನಮ್ಮಲ್ಲಿ** 

ಚಿನ್ನ ಮತ್ತು ಬೆಳ್ಳಿಯ ಆಭರಣಗಳ ಈಡಿನ ಮೇಲೆ ಕಡಿಮೆ ದರದ ಬಡ್ಡಿಯಲ್ಲಿ ಸಾಲ ಕೊಡಲಾಗುವುದು. ಅಲ್ಲದೆ ಆರ್ಡರ್ ಕೊಟ್ಟಲ್ಲಿ ಗಿರಾಕಿಗಳ ಮನಸ್ಸಿಗೊಪ್ಪುವ ಅಪ್ ಟು ಡೇಟ್ ಫೇಶನಿನ ಆಭರಣಗಳನ್ನು ಕ್ಲಪ್ತ ಕಾಲದಲ್ಲಿ ನಾಜೂಕಾಗಿ ತಯಾರಿಸಿಕೊಡುವೆವು.

**ಯು. ಕೆ. ಗೋವಿಂದ ನಾಯಕ್**
ಸರಾಫ್ ದಿ. ಕೆನರಾ ಬ್ಯಾಂಕಿಂಗ್ ಕೊರ್ಪೊರೇಶನಿನ ಸಮೀಪ ಉಡುಪಿ.

# ಹಸನ್ಮುಖಿ ತಿಮ್ಮಯ್ಯ

ಬರೆದವರು: "ದೊಡ್ಡೇರಿ" ಸಾಗರ

ಹೆರೇ ಮನೆಗಳಿರುವ ಊರಾದರೂ ಅದು ನಮಗೆ ವಿಶ್ವವೆಂದೇ ಹೇಳಬೇಕು. ಊರಮುಂದಿನ ಅಡಿಕೆತೋಟ, ಪಕ್ಕದ ಹೊಟ್ಟುಕೆರೆ, ಅದರ ಪಕ್ಕದ ಚಿಕ್ಕ ಕಾಡು, ಊರಹಿಂದಿನ ಗದ್ದೆ, ಅದರ ಪಕ್ಕದ ಹುಲ್ಲುಗಾವಲು ಇವೆಲ್ಲಾ ನಮಗೆ ಆನಂದದಾಯಕವಾದುವುಗಳು. ಇವುಗಳಿಗೆ ಮತ್ತಷ್ಟು ಕಳೆಯನ್ನು ಕೊಡಲು ಜತೆಗೆ ತಿಮ್ಮಯ್ಯ! ಹೆಸರಿಗೆ ಕುಂದು ತರದಂತಹ ಮನುಷ್ಯ! ಮೇಲುಸಾಲಿನ ಹಲ್ಲುಗಳು ಅವನ ಗಲ್ಲದ ಸೊಬಗನ್ನು ನೋಡಲು ಹೊರಕ್ಕೆ ಬಂದಿರುವುದರಿಂದ ಸದಾ ಹಸನ್ಮುಖಿ!

ಬೆಳಿಗ್ಗೆ ಗಂಜಿಯೂಟಮಾಡಿ ಮನೆಯಿಂದ ಒಂದೇ ಹಾರಿಕೆಗೆ ತೋಟಕ್ಕೆ ಹಾರಿದನೆಂದರೆ, ನಾವೆಲ್ಲ ಅಲ್ಲಿಗೆ ಹೋಗುವುದರೊಳಗಾಗಿ ಕಿತ್ತಳೆಯ ಮರದ ಮೇಲೋ ಕಂಚಿ ಮರದ ಮೇಲೋ ಬೀಡು ಬಿಟ್ಟಿರುತ್ತಿದ್ದನು. ಹಣ್ಣು ಕಾಯಿಗಳನ್ನು ಕಿತ್ತು ಎಸೆಯುವದೆಂದರೆ ಅವನಿಗೆ ಒಂದು ದೊಡ್ಡ ಆನಂದ. ನಮಗಂತೂ ಮತ್ತೂ ಖುಷಿ! ನಮ್ಮ ಉಪಯೋಗಕ್ಕೆಂದು ಹಣ್ಣುಗಳು ಬೀಳುತ್ತಿದ್ದುವು. ನಾವು ಹಣ್ಣುಗಳನ್ನು ಆರಿಸಿಕೊಳ್ಳುವುದರೊಳಗಾಗಿ ಅವನು ಪಕ್ಕದ ಹೊಟ್ಟುಕೆರೆಯ ಏರಿಯಮೇಲಿರುವ ಆಲದಮರದ ಉದ್ದನೆ ಬೀಳಲಿಗೆ ಜೋತುಬಿದ್ದು ಒಂದುಸಲ ಕೀಹಾ! ಎಂದು ಕೂಗಿ ಜೋತಾಡಿಬಿಟ್ಟು ಪಕ್ಕದ ಗದ್ದೆಗೆ ಹಾರಿಬಿಡುತ್ತಿದ್ದನು. ಅವನನ್ನು ಹಿಂಬಾಲಿಸುವುದೆಂದರೆ ಇನ್ಯಾರನ್ನು ಮಾಡಿಕೊಳ್ಳುವುದು ಉತ್ತಮ. ಮೊದಲು ಆ ಆಲದ ಮರದ ಹತ್ತಿರ ಹೋಗಲೇ ಹೆದರಿಕೆ ಅದರಲ್ಲೊಂದು ಭೂತನಿದೆಯಂತೆ. ನಮ್ಮೂರಿಗೆ ಬನ್ನಿರಿ- ಎಲ್ಲೆಲ್ಲಿ ಎಷ್ಟುದೊಡ್ಡ ಮರಗಳಿವೆಯೋ ಅವುಗಳಲ್ಲೆಲ್ಲಾ ಒಂದು ಭೂತವೋ ಯಕ್ಷಿಯೋ, ಜಟ್ಟಿಗವೋ ಇಲ್ಲವೆ ನಾಗವೋ ಏನಾದರೂ ಇದ್ದೇ ಇರುತ್ತದೆ. ಅಂತೂ ನೀವು ಯಾವ ದೊಡ್ಡ ಮರದ ಹತ್ತಿರವೂ ಹೋಗುವ ಹಾಗಿಲ್ಲ. ಆಲದಮರದಲ್ಲಿ ಭೂತವಿದೆ ಎಂತ ಹೇಳಿದೆನಲ್ಲವೆ! ಅದಕ್ಕೆ ಆಗ ಸಿಟ್ಟು ಬೇರೆ ಬಂದಿತ್ತಂತೆ! ಸುದ್ದಿ ಅದು. ಒಂದೊಂದು ಸಲ ರಾತ್ರಿ ಆಲದ ಮರವೇ ಬೀಳುವಷ್ಟು ಬಲವಾಗಿ ಮರವೆಲ್ಲಾ ಅಲ್ಲಾಡುವುದು. ಅದರ ಮರ್ಮರ ಶಬ್ದವು ನಾಲ್ಕು ಫರ್ಲಾಂಗ್ ಆಚೆ ವಾಸವಾಗಿದ್ದ ನಮ್ಮೂರ ತಳವಾರ ಈರನಿಗೆ ಕೇಳಿದುದೂ ಉಂಟು. ಈರ ತೋಟದ ಕಾವಲಿಗೆಂದು ಹೆಗಲಮೇಲೆ ಕೋಲು ಹಾಕಿಕೊಂಡು ಕಾವಲಿಗೆ ಹೊರಟಾಗ ಆಲದಮರದ ಹತ್ತಿರ ಬಿಳಿಯ ದೊಡ್ಡ ಹಾವು ಸುತ್ತುತ್ತಿದ್ದುದನ್ನು ನೋಡಿದನಂತೆ. ಹೀಗಿರುವಾಗ ನಾವು ಅಲ್ಲಿಗೆ ಹೋಗುವುದಾದರೂ ಹೇಗೆ?

ಈ ಭೂತವನ್ನೂ ಸಿಟ್ಟಿಗೆಬ್ಬಿಸಿದವನು ನಮ್ಮ ತಿಮ್ಮಯ್ಯ. ಅವನ ಮನೆಯವರು ಪ್ರತಿ ಹುಣ್ಣಿಮೆಗೂ ಭೂತನಿಗೆಂದು ಮೊಸರನ್ನವನ್ನು ಕೊಡುತ್ತಿದ್ದರು. ಎಲ್ಲಾದರೂ ತಪ್ಪಿದರೆ ಮನೆ ತುಂಬಾ ಇರುವೆ ಏಳುವುದೂ, ದನಕರುಗಳು ಕಳೆದು ಹೋಗುವುದೂ ಉಂಟು. ಕಳೆದ ಹುಣ್ಣಿಮೆಯ ದಿನ ತಿಮ್ಮಯ್ಯನ ತಂದೆಯವರಿರಲಿಲ್ಲ. ಆದ್ದರಿಂದ ತಿಮ್ಮಯ್ಯನ ತಾಯಿ ಮೊಸರನ್ನ ಕಳಿಸಿ ಮಗನ ಹತ್ತಿರ ನೈವೇದ್ಯ ಮಾಡಿಕೊಂಡು ಬರುವಂತೆ ಹೇಳಿದರು. ಅವರು ಕೈತೊಳೆಯಲು ಹೋದಾಗ ಇವನೇನು ಮಾಡಿದ ಗೊತ್ತೆ? ಮೆತ್ತಗೆ ಕುಡಿಕೆಯಿಂದ ನಾಲ್ಕು ಮಾವಿನಮಿಡಿ ತೆಗೆದು ಅನ್ನದಲ್ಲಿ ಬಚ್ಚಿಟ್ಟುಬಿಟ್ಟ. ತಾಯಿ ಬಂದೊಡನೆ ಗಂಭೀರವಾಗಿ ಮಡಿಯುಟ್ಟು ಮೊಸರನ್ನ ತೆಗೆದುಕೊಂಡು ಹೊರಟ. ಇವನ ನಾಲಿಗೆ, ಬಾಯಿಗಳು ಇವನನ್ನು ಆಲದ ಮರದವರೆಗೆ ಹೋಗಲು ಬಿಡಲೇ ಇಲ್ಲ! ತೋಟದಲ್ಲೇ ಕುಳಿತು ಅದನ್ನು ಪಟ್ಟಾಗಿ ಹೊಡೆದುಬಿಟ್ಟು ಕೈಬೀಸಿಕೊಂಡು ಮನೆಗೆ ಬಂದನು. ಅಷ್ಟರಲ್ಲಿ ಇವನ ತಂದೆ ಮನೆಗೆ ಬಂದಿದ್ದರು. ಊಟದ ಹೊತ್ತು ಆಗಿತ್ತು. ಊಟಕ್ಕೆ ಕರೆದರೆ ತಿಮ್ಮಯ್ಯ ಸರ್ವಥಾ ಹೋಗುವುದಿಲ್ಲ, ಭೂತನಿಗೆಂದು ಕೊಟ್ಟಿದ್ದ ಎರಡಾಳನ್ನವನ್ನು ಒಬ್ಬನೇ ಉಂಡಿರುವಾಗ ಹಸಿವೆ ಹೇಗಾಗಬೇಕು! ಇದನ್ನು ನೋಡಿ ಅವರ ತಂದೆಯವರಿಗೆ ಅನುಮಾನವಾ

ಯಿತು. ಅವನನ್ನು ಹತ್ತಿರ ಕರೆದು ಕೈಮೂಸಿ ನೋಡಿದರು. ಒಳ್ಳೆ ಜೀರಿಗೆ ಮಾವಿನಮಿಡಿವಾಸನೆ. ಎರಡೇಟು ಹಾಕುವ ಹೊತ್ತಿಗೆ ಕಳ್ಳತನ ಹೊರಬಿದ್ದು ಹೋಯಿತು. ಹೊಡತಕ್ಕೆ ಹೆದರುವ ಪ್ರಾಣಿಯೇ ಅಲ್ಲ ಅವನು. ಏಕೆಂದರೆ ನಮ್ಮಲ್ಲೆಲ್ಲಾ ಒಂದು ಷರತ್ತು ಅವನದು. ಮಧ್ಯಾಹ್ನದ ವೇಳೆ ಮನೆಯವರು ನಮಗೆಲ್ಲಾ "ಬಾಯಿಬಡಿಗೆ" ಕೊಟ್ಟಮೇಲೆ ನಾವೆಲ್ಲ ದೇವಸ್ಥಾನದಲ್ಲಿ ಸೇರಿ ನಮ್ಮ ತಿಂಡಿಗಳನ್ನು ಅದಲು ಬದಲು ಮಾಡಿಕೊಳ್ಳುವ ಪದ್ಧತಿ. ಅವನದು ಹಾಗಲ್ಲ. ಅವನು ಮಂಡಿಯೂರಿ ಕುಳಿತುಕೊಳ್ಳಬೇಕು. ನಾವೆಲ್ಲ ಒಬ್ಬೊಬ್ಬರಾಗಿ ನಮ್ಮ ಶಕ್ತಿ ಮೀರಿ ಒಂದೊಂದು ಗುದ್ದು ಹೊಡೆಯಬೇಕು. ಅದನ್ನು ಸಹಿಸಿಕೊಂಡ ಫಲವಾಗಿ ನಾವು ಅವನಿಗೆ ಒಂದೊಂದು ಹಿಡಿ ತಿಂಡಿಕೊಡಬೇಕು. ಹೀಗೆ ಏಟಿಗೊಂದು ಹಿಡಿತಿಂಡಿ!

ಕೆರೆಏರಿ ಮೇಲಿನ ಆಲದ ಮರದ ಹತ್ತಿರ ನಾವೆಲ್ಲಾ ಏಕೆ ಹೋಗುವುದಿಲ್ಲ ಎಂಬುದನ್ನು ತಿಳಿಸಲು ಇಷ್ಟೆಲ್ಲಾ ಹೇಳಿದೆ. ಅಲ್ಲಿಂದ ಗದ್ದೆಗೆ ಹಾರಿದ ತಿಮ್ಮಯ್ಯ ಮಧ್ಯಾಹ್ನ ಊಟದ ಹೊತ್ತಿನ ವರೆಗೂ ಪತ್ತೆಯೇ ಇಲ್ಲ. ಎಲ್ಲಿ ಹೋಗಿದ್ದನೊ ಏನುಮಾಡುತ್ತಿದ್ದನೋ ದೇವರೇ ಬಲ್ಲ. ಎಷ್ಟೋ ದಿನಗಳಮೇಲೆ ಅದರ ಪತ್ತೆ ಹತ್ತಿತು. ಅದನ್ನು ಪತ್ತೆ ಹಚ್ಚಿದವರು ಎರಡುಜನ ಪಾತಾಳಲೋಕದವರು.

ಒಂದು ದಿನ ಎರಡು ಜನ ಪಾತಾಳ ಲೋಕದವರು ತಿಮ್ಮಯ್ಯನನ್ನು ಚತುರ್ಭುಜ ಮಾಡಿಕೊಂಡು ಅಂದರೆ ಕೈಗಳನ್ನು ಕಟ್ಟಿಕೊಂಡು ಊರಿಗೆ ಎಳೆದು ತಂದರು. ಗಲಭೆಯೇ ಗಲಭೆ! ಊರಜನವೆಲ್ಲಾ ಸೇರಿತು. ತೋಟದಲ್ಲಿದ್ದ ತಳವಾರ ಊರಿಗೆ ಬೆಂಕಿಬಿದ್ದಿತೇನೋ ಅಂತ ಓಡಿಬಂದನಂತೆ! ಪಾತಾಳ ಲೋಕದವರು ತಿಮ್ಮಯ್ಯನ ಚೇಷ್ಟೆಯ ವಿಷಯವಾಗಿ ಒಂದು ಪುಟ್ಟ ಲೆಕ್ಚರ್ ಮಾಡಿದರು. ಅವರು ಮಾತಾಡಿದಂತೆಯೆ ನಾನು ಬರೆದರೆ ಪ್ರೆಸ್ಸಿನಲ್ಲಿದ್ದ ಒತ್ತುಗಳು ಕಡಿಮೆ ಬೀಳುತ್ತವೆ ಮತ್ತು ನಿಮಗೆ ಅರ್ಥವೂ ಆಗುವ ಹಾಗಿಲ್ಲ. ಬೇಕಾದರೆ ಮಾದರಿಗಾಗಿ ಎರಡು ಪುಟ್ಟ ವಾಕ್ಯಗಳನ್ನೂ ಬರೆಯುವ. ನಿಮಗೆ ಅರ್ಥವಾಗುವುದೋ ಹೇಗೆ ನೋಡಿರಿ (ಇಲ್ಲವಾದರೆ ಸಂಪಾದಕರನ್ನೂ ಕೇಳಿರಿ.) "ಸಾರ್ಬಾಳ ಮೆಣ್ಸ್ನಾಯ್ದರ" "ಕಪ್ಸಾಯ್ರಪ್ಯೂಡ್ರ"

ಇದು ಹೇಗಾದರೂ ಇರಲಿ, ನಮ್ಮ ತಿಮ್ಮಯ್ಯನನ್ನ ಚತುರ್ಭುಜ ಮಾಡಲು ಕಾರಣವಿದು. ನಮ್ಮೂರ ಗದ್ದೆ ಪಕ್ಕದಲ್ಲಿ ರಸ್ತೆ ಇದೆ. ನಮ್ಮೂರಿಗೆ ಬರುವ ಹಾದಿ. ರಸ್ತೆ ಪಕ್ಕದಲ್ಲಿಯೇ ಒಂದು ಅತ್ತಿಮರವಿದೆ. ಅದರ ಬುಡಪೆಂದರೆ ಎರಡು ಜನ ತೆಕ್ಕೆಹಾಕಿದರೂ ನಿಲುಕುವ ಹಾಗಿಲ್ಲ. ಅಷ್ಟು ದೊಡ್ಡದು. ಅದರೇನು, ಒಳಗೆ ದೊಡ್ಡ ಟೊಳ್ಳು. (ಎಷ್ಟೋ ಜನ ದೊಡ್ಡಮನುಷ್ಯರಂತೆ!)ದಿನಾಲು ತಿಮ್ಮಯ್ಯ ಗದ್ದೆಯಿಂದ ಓಡಿದವನು ಆ ಮರದಲ್ಲಿಗೆ ಹೋಗಿ ಒಂದು ಐವತ್ತು ಕಲ್ಲು ಆರಿಸಿಕೊಂಡು, ಜೇಬು ತುಂಬ ತುಂಬಿಕೊಂಡು, ಆ ಮರದ ಪೊಟ್ಟರೆಯಲ್ಲಿ ಅಡಗಿಕೊಳ್ಳುತ್ತಿದ್ದನಂತೆ. ಹಾದಿಯಲ್ಲಿ ತಿರುಗುವವರಿಗೆಲ್ಲಾ ಕಲ್ಲು ಹೊಡೆಯುವುದು ಚುಪ್ಪನೆ ಅಡಗಿಕೊಳ್ಳುವುದು. ಅವರು ಹೆದರಿ ಕಂಗಾಲಾಗಿ ಓಡುವುದನ್ನು ನೋಡಿ ಪಿಸಪಿಸನೆ ನಗುವುದು;ಹೀಗೆ ಮಧ್ಯಾಹ್ನದ ವರೆಗೂ ಹೊತ್ತು ಕಳೆದು ಊಟಕ್ಕೆ ಮನೆಗೆ ಬರುವುದು ಇವನ ಪದ್ಧತಿಯಾಗಿತ್ತು. ಆ ದಿನ ಎಂದಿನಂತೆ ಇವನು ಹಾದಿಹೋಕರನ್ನು ಹೆದರಿಸಬೇಕೆಂದು ಅತ್ತೀ ಮರದ ಪೊಟರೆಯಲ್ಲಿ ಅಡಗಿ ಕುಳಿತಿದ್ದ. ಎರಡು ಜನ ಪಾತಾಳಲೋಕದವರು ಬಂದರು. ಇವನು ತಲೆಯ ಮೇಲೆ ಕಲ್ಲೆಸೆದನು. ಪೆಟ್ಟು ಚೆನ್ನಾಗಿ ಹತ್ತಿದ್ದರಿಂದಲೇ ಅಥವಾ ಧೈರ್ಯವಂತರಾಗಿದ್ದುದರಿಂದಲೇ ಅವರು ಒಂದು ಕೈ ನೋಡಿಯೇ ಬಿಡುವುದು ಅಂತ ಅತ್ತಿತ್ತ ಹುಡುಕ ತೊಡಗಿದರು. ಅವರ ಈ ಚರ್ಯೆ ನೋಡಿ ತಿಮ್ಮಯ್ಯ ನಗು ತಡೆಯಲಾರದೆ ನಕ್ಕು ಬಿಟ್ಟ. ಕಳ್ಳನಿದ್ದ ಸ್ಥಳ ಪತ್ತೆಯಾಯಿತು. ಅವರಲ್ಲೊಬ್ಬ ಕಳ್ಳನನ್ನು ಹಿಡಿಯಲೆಂದು ಮರವನ್ನು ಹತ್ತಲು ಪ್ರಯತ್ನ ಮಾಡಿದನು. ಆದರೆ ಅಷ್ಟರಲ್ಲಿ ಮತ್ತೊಂದು ದೊಡ್ಡ ಕಲ್ಲು ಅವನ ಭುಜವನ್ನುರೊಯ್ಯನೆ ಬಂದು ತಾಗಿದುದರಿಂದ ಒಂದೇ ಸಲ ನೆಲವನ್ನು ತಬ್ಬಿಕೊಂಡನು. ಇದರಿಂದ ತಿಮ್ಮಯ್ಯನಿಗೆ ಇನ್ನೂ ಹೆಚ್ಚಿನ ನಗು ಬಂದಿತು.

ಪಾತಾಳ ಲೋಕದವರಿಬ್ಬರೂ ಸೇರಿ ಬೇರೊಂದು ಉಪಾಯವನ್ನು ಹುಡುಕಿದರು. ಒಬ್ಬ ಮರದ ಹತ್ತಿರ ನಿಂತು ತಿಮ್ಮಯ್ಯ ಹಾರಿ ಓಡಿ ಹೋಗದ ಹಾಗೆ ನೋಡುತ್ತಿದ್ದನು. ಮತ್ತೊಬ್ಬ ಮರದ ಸುತ್ತಲೂ ತರಗೆಲೆ ಒಣಗಿದ ಕಡ್ಡಿ ಹಾಕಿ ಗುಡ್ಡೆ

(ಮುಂದಿನ ಪುಟ ನೋಡಿರಿ)



# ಬುದ್ಧಿವಂತ



ಪ್ರೇಮಿಕೆಯನ್ನು ಮದುವೆಯಾಗುವವನು ಹುಚ್ಚ; ಮದುವೆಯಾದವಳನ್ನು ಪ್ರೇಮಿಸುವವನು ಚತುರ!

. . . . . .

ತರುಣಿಯರು ಪ್ರಜಾಸತ್ತಾತ್ಮಕ ಮನೋವೃತ್ತಿಯವರಲ್ಲ. ಒಬ್ಬ ತರುಣನಂತೆ ಇನ್ನೊಬ್ಬನಿದ್ದಾನೆಂದರೆ ಅವರು ಕೇಳುವಂತಿಲ್ಲ.

. . . . . .

ನಿಮ್ಮ ಕಿಸೆಯಲ್ಲಿ ಹಣವುಂಟೆಂದು ಇತರರು ತಿಳಿಯಬೇಕಾದರೆ ಕಾಲು ಅಲ್ಲಾಡಿಸುವುದೇ ಯೋಗ್ಯ ಉಪಾಯ.

. . . . . .

ಅವನು: ನನಗೊಂದು—ಕೊಡುವೆಯಾ?

ಅವಳು: ನನ್ನಲ್ಲಿ ಚಿಲ್ಲರೆ ವ್ಯಾಪಾರವಿಲ್ಲ.

. . . . . .

ರಾಮರಾಯರು ಎಷ್ಟು ಒಳ್ಳೆಯವರೆಂದರೆ ಯಾರೂ ಅವರೊಡನೆ "ಇಲ್ಲ, ಆಗುವುದಿಲ್ಲ"ವೆಂದುದನ್ನು ಅವರು ಕೇಳಲಿಲ್ಲವಂತೆ

ಪ್ರಾಯಶಃ ಅವರು ಕಿವುಡರಾಗಿರಬೇಕು.

. . . . . .

ಅವನು:— ಸತ್ತವರೊಡನೆ ಮಾತಾಡಲು ಸಾಧ್ಯವಿದೆಯೆ?

ಅವಳು:— ಓಹೋ, ನಾನು ನಿಮ್ಮೊಡನೆ ಮಾತಾಡುತ್ತಿದ್ದೇನಲ್ಲಾ. ಇದರಿಂದಲೇ ಸಾಧ್ಯವಿದೆಯೆಂದು ಗೊತ್ತಾಗುವುದಿಲ್ಲವೆ?

. . . . . .

ಸುಳ್ಳನ್ನು ಕಂಡು ಹಿಡಿಯುವ ಶ್ರೇಷ್ಠ ಯಂತ್ರವೆಂದರೆ ಹೆಂಡತಿ!

. . . . . .

ಹೆಚ್ಚಿನ ತರುಣಿಯರ ಮುಖ ನೋಡಿದರೆ ಅವರು ರಾತ್ರಿ ಶಾಲೆಯ ವಿದ್ಯಾರ್ಥಿಗಳೆಂದು ಕಾಣುತ್ತದೆ.

. . . . . .

ಭಂಡವಾಳಗಾರನೆಂದರೆ ನಿಮ್ಮನ್ನು ಕೆಲಸಮಾಡಿಸಿ ಬದುಕುವವನು.

. . . . . .

ಸುನೀತಾದೇವಿಯು "ಟ್ಯಾಕ್ಸಿವಾಲಿ"ಯಾಗಿ ಬರುವಳಂತೆ. ಜಾಗ್ರತೆ. ನಿಮ್ಮನ್ನು ಅವಳ ಟ್ಯಾಕ್ಸಿಯಲ್ಲಿ ಹಾಕಿಬಿಡಬಹುದು!

ಮೋಹನ್ ಪಿಕ್ಚರ್ಸ್ಸಿನವರ "ಚಾಬುಕಿ ವಾಲಿ?"ಯೂ ಬರುತ್ತಾಳಂತೆ. ಅವಳು ಚಬುಕು (ಬೆತ್ತ) ಹಿಡಿದು ಹೊಡೆದುಬಿಡಬಹುದು. ಇಂಥವರೇ ಬರಬೇಕು?

. . . . . .

"ಮದುವೆ ಮುಂಜಿಗಳಿಗೆ ಬೇಕಾದ ಆಭರಣ"ವೆನ್ನುತ್ತಿದೆಯೊಂದು ಜಾಹೀರಾತು.

ಆದರೆ ಆಭರಣಗಳನ್ನು ತೆಗೆಯುವಾಗ ಯಾರೂ ನೋಡದಂತೆ ಜಾಗರೂಕರಾಗಿರಬೇಕೆಂದು ಸೂಚನೆ

. . . . . .

ಚೀನವನ್ನು ಸಂಗ್ರಹಿಸುವದೇ ಜಪಾನಿನ ಪ್ರಕೃತದ ಉಪವೃತ್ತಿ.

. . . . . .

ಒಂದು ಕರೆನ್ಸಿ ನೋಟು ಆರು ತಿಂಗಳುಗಳ ತನಕ ಬಾಳುತ್ತದಂತೆ; ಆದರೆ ನನ್ನ ಕೈಯಲ್ಲಿ ಇಷ್ಟರ ತನಕ ಒಂದೂ ಸಾಯಲಿಲ್ಲ.

. . . . . .

ಜನಾಂಗಸಭೆಯು ಯುದ್ಧಗಳನ್ನು ನಿಲ್ಲಿಸಲಾರದೆಂದು ಆದರೆ ಅದು ಎಷ್ಟು ಯುದ್ಧಗಳಾಗುತ್ತಿವೆಯೆಂದು ಲೆಕ್ಕಮಾಡುವುದಿಲ್ಲವೆ?

---

## ಹಸನ್ಮುಖಿ ತಿಮ್ಮಯ್ಯ

(ಹಿಂದಿನ ಪುಟದಿಂದ)

ಮಾಡಿದ. ಸರಿ, ಬೆಂಕಿ ಹೊತ್ತಿಸಿ ಹೋಮ ಮಾಡಲು ಸುರು ಮಾಡಿದರು. ಆ ಹೊಗೆ! ಆ ಜ್ವಾಲೆ! ಎಲ್ಲಾ ಮರದ ಪೊಟರೆಯೊಳಗೆ ಸೇರಿದ ಕೂಡಲೆ, ತಾನು ಅಲ್ಲೇ ಇದ್ದರೆ ಪೂರ್ಣಾಹುತಿಯಾಗಬೇಕಾದೀತೆಂದು ಯೋಚಿಸಿ ತಿಮ್ಮಯ್ಯ ಕಣ್ಣನೆ ಹೊರಕ್ಕೆ ನೆಗೆದನು. ಅದಕ್ಕೆಸಿದ್ಧರಾಗಿಯೇ ಇದ್ದ ಪಾತಾಳ ಲೋಕದವರು ಅವನನ್ನು ಹಿಡಿದು ಏನೇನು ಮಾಡಬೇಕೋ ಅದನ್ನೆಲ್ಲಾ ಮಾಡಿ, ಚತುರ್ಭುಜ ಮಾಡಿಕೊಂಡು ಊರಿಗೆ ತಂದರು.

ಮಾರನೆ ದಿನದಿಂದ ತಿಮ್ಮಯ್ಯನ ದಿನಚರ್ಯೆಯಲ್ಲಿ ಸ್ವಲ್ಪ ವ್ಯತ್ಯಾಸ ವಾಯಿತು. ಏಕೆಂದರೆ ಭೂತದಂತಿದ್ದ ಅತ್ತೀಮರ ಭಸ್ಮೀಭೂತವಾಗಿತ್ತು!

---

# ಛಾಯಾ  ಲೋಕ.

ಸಂಗ್ರಾಹಕರು:—ಶ್ರೀ. ಹಯವದನರಾಯರು

## ಅನ್ವರ್ಥ ನಾಮ

ಕುಮಾರಿ ಸುಲೋಚನೆಯು ಈಗ ಶ್ರೀಮತಿ ಸುಲೋಚನೆಯಾಗಿದ್ದಾಳೆ. ಇಂಪೀರಿಯಲ್ ಕಂಪೆನಿಯನ್ನು ಬಿಟ್ಟು ಆಕೆಯೀಗ ರುಬೀ ಮೇಯರ್ ಫಿಲ್ಮ್ ಕಂಪೆನಿಯೆಂಬುದನ್ನು ಪ್ರಾರಂಭಿಸಿದ್ದಾಳೆ. 'ಪ್ರೇಮ ಜ್ಯೋತಿ'ಯೆಂಬುದು ಪ್ರಥಮ ಚಿತ್ರದ ಹೆಸರು.

ವಿವಾಹವಾದೊಡನೆ ತಯಾರಿಸುವ ಚಿತ್ರಕ್ಕೆ ಬಹಳ ಸಮರ್ಪಕವಾದ ಹೆಸರು!

ೲ ೲ ೲ

## ಒಳಗೂ ಹೊರಗೂ

ಸುಲೋಚನೆಯು ಈಗ ಒಳಗೂ ಹೊರಗೂ ಅಭಿನಯಿಸುತ್ತಿದ್ದಾಳೆ. "ಪ್ರೇಮ ಜ್ಯೋತಿ"ಯಲ್ಲಿ ಡಿ. ಬಿಲ್ಲಿಮೋರಿಯನೊಡನೆ. ಮನೆಯಲ್ಲಿ ಡಾ| ವೈನ್ ಗಾರ್ಟನ್-(ಗಂಡ) ಇವರೊಡನೆ-ಹೀಗೆಂದು ಒಬ್ಬ ಚಲಚ್ಚಿತ್ರ ಪತ್ರಿಕೆಯ ಸಂಪಾದಕರು ಬರೆಯುತ್ತಾರೆ.

ಜಗತ್ತೊಂದು ರಂಗಭೂಮಿ. ಅದರಲ್ಲಿರುವ ಮಾನವ ಜೀವಿಗಳು. ಅಭಿನಯಕಾರರು ಎಂಬುದೀಗ ಸ್ಪಷ್ಟವಾದಂತಾಯಿತು!

## ಯಾರಿಗೆ ಗೊತ್ತು?

ಜುಬೇದಳಿಗೊಂದು ಸುಂದರವಾದ ಮಗು ಹುಟ್ಟಿತೆಂಬುದು ನಿಜವಾದರೆ ಅದರ ತಂದೆ ಯಾರು? ಎಂದೊಬ್ಬ ವಾಚಕರ ಪ್ರಶ್ನೆ.

ನಮಗೇನು ಗೊತ್ತು? ಆಕೆಯನ್ನೇ ಕೇಳಬೇಕೆಂದು ಒಬ್ಬ ಸಂಪಾದಕರ ಉತ್ತರ. ಮೇಲಿನ ಪ್ರಶ್ನೆಗೆ ಕೆಳಗಿನದೇ ಯೋಗ್ಯ ಉತ್ತರ.

ೲ ೲ ೲ

## ಹೊಸ ಸ್ವಾಗತ ಪತ್ರ

ಶಾಂತಾ ಆಪ್ಟೆಯನ್ನು ಸ್ವತಹ ಕಾಣಲು ಒಬ್ಬರಿಗೆ ಆಶೆಯಿದೆಯಾದುದರಿಂದ ಅವರ ಸ್ವಾಗತವನ್ನು ಆಕೆಯು ಸ್ವೀಕರಿಸಬಹುದೋ ಎಂದೊಬ್ಬರು ಕೇಳಿದುದಕ್ಕೆ—

ಓಹ್ಹೋ! ಚೆಕ್ ಪುಸ್ತಕದಿಂದ ಹರಿದ ಭವ್ಯವಾದ ಸ್ವಾಗತವನ್ನಿತ್ತರೆ ಸ್ವೀಕರಿಸಲೂ ಬಹುದು ಎಂದು ಉತ್ತರವಿತ್ತಿದ್ದಾರೆ ಮುಂಬಯಿಯ ಪತ್ರಿಕೆಯ ಸಂಪಾದಕರೊಬ್ಬರು.

ಇದು ಅನುಭವದ ಮಾತಾಗಿರಬಹುದು!

ೲ ೲ ೲ

## ಇಂಪೀರಿಯಲ್ ಕಂಪೆನಿ ಹೋಯಿತು!

ಭಾರತದ ಹಳೆ ಚಲಚ್ಚಿತ್ರ ಕಂಪೆನಿಯಾದ ಇಂಪೀರಿಯಲ್ ಫಿಲ್ಮ್ ಕಂಪೆನಿಯು ಆರ್ಥಿಕ ಮುಗ್ಗಟ್ಟಿನಿಂದಾಗಿ ತನ್ನ ಅವಸಾನ ಕಾಲವನ್ನು ಕಂಡಿತು. ಸುಮಾರು ೩೦೦ ಜನ ಕೆಲಸಗಾರರು ನಿರುದ್ಯೋಗ ರಾಜ್ಯದ ಪ್ರಜೆಗಳಾದರು. ಭಾರತೀಯ ಚಲಚ್ಚಿತ್ರ ಕೈಗಾರಿಕೆಯು ಮುನ್ನಡೆಯುತ್ತದೆಯೋ ಅಥವಾ ಹಿನ್ನಡೆಯುತ್ತದೆಯೋ ಎಂಬ ಪ್ರಶ್ನೆಗೆ ಇಂಪೀರಿಯಲ್ ಕಂಪೆನಿಯೊಂದು ಸಾಕ್ಷಿ.

ಸುಲೋಚನೆಯು ಇಂಪೀರಿಯಲನ್ನು ಬಿಟ್ಟದ್ದೇ ತಡ. ಇಂಪೀರಿಯಲಿನ ಸುಲೋಚನಗಳು ಕುರುಡಾದುವು! ವಿಧಿ ವಿಲಾಸ.

ೲ ೲ ೲ

## ಸರೋಜವೂ ಬಾಡಿತು!

"ಸರೋಜ ಮೂವಿಟೋನ್ ಕೂಡಾ ಆರ್ಥಿಕ ದುರವಸ್ಥೆಗೆ ತುತ್ತಾಗಿ ಬಾಡಿಹೋಗಿ ೨೫೦ಕ್ಕಿಂತ ಮಿಕ್ಕಿದ ತನ್ನ ಕೆಲಸಗಾರರನ್ನು ಬೀದಿಪಾಲು ಮಾಡಿತು. ಕಂಪೆನಿಗಳು ಒಂದೊಂದೇ ಉರುಳುತ್ತಿರುವುದು ಚಲಚ್ಚಿತ್ರ ಕೈಗಾರಿಕೆಯ ದುಃಸ್ಥಿತಿಯನ್ನು ತೋರಿಸುತ್ತದೆ. ಯೋಗ್ಯ ಚಿತ್ರಗಳನ್ನು ಜನತೆಗೆ ಕೊಡದಿದ್ದರೆ ಜನತೆಯನ್ನು ದೂರಿ ಫಲವಿಲ್ಲ! ಸಾಮ್ರಾಜ್ಯಗಳುರುಳುವಾಗ ಫಿಲ್ಮ್ ಕಂಪೆನಿಗಳು ಉರುಳುವುದರಲ್ಲಿ ಆಶ್ಚರ್ಯವೇನಿದೆಯೆಂಬುದೇ ಸಮಾಧಾನದ ಸಂಗತಿ.

ೲ ೲ ೲ

## ಇಬ್ಬರ, ಜಗಳ ಮೂರನೆಯವನಿಗೆ ಆಯ?

ಹೀಗಾಯಿತು ಮುಂಬಯಿಯಲ್ಲಿ ಪ್ರಭಾತ ಕೆಂಪೆನಿಗೂ ಜನರಲ್

ಫಿಲ್ಮ್ ಕಂಪೆನಿಗೂ ದೊಡ್ಡ ಜಗಳ ಯಾಕೆ? 'ಅಮರ ಜ್ಯೋತಿ'ಯಲ್ಲಿ ಅಭಿನಯಿಸಿದ ಬಾಬಾ ಸಾಹೇಬ್ ನಂದ್ರೇಕರರು ಪ್ರಭಾತದೊಡನೆ ಮೂರು ವರುಷದ 'ಕಂಟ್ರಾಕ್ಟ್' ಮಾಡಿದ್ದರು. ಅರ್ಧದಲ್ಲಿಯೇ ಅವರು ಜನರಲ್ ಫಿಲ್ಮ್ ಕಂಪೆನಿಯ 'ಚಂದ್ರರಾವ್ ಮೋರೆ', 'ಬಾಘ್ ಬನ್' ಮೊದಲಾದುವುಗಳಲ್ಲಿ ಅಭಿನಯಿಸಿದರು. ವಾಣಿಜ್ಯ ವಿಚಾರವಲ್ಲವೆ? ಪ್ರಭಾತದವರು ಜನರಲ್ ಫಿಲ್ಮ್ ಕಂಪೆನಿಯವರ ಮೇಲೆ ಮಾಡಿದರು ಕೇಸು! ಕೋರ್ಟು ಕಛೇರಿಗಳಿಗೆ ಹಣವಾಯಿತು. ಇವರ ಜಗಳದಿಂದಾಗಿ ವಕೀಲರುಗಳಿಗೆ ಲಾಭವಾಯಿತು. ಪ್ರಭಾತಕ್ಕೆ ಜಯವಾಯಿತು.

**ಈಗ?**

ಜನರಲ್ ಫಿಲ್ಮ್ ಕಂಪೆನಿಯ ಮ್ಹಾಲಕರಾದ ಫಝುಲ್ ಭೋಯ್ ಸಹೋದರರು ಚಿತ್ರಗಳನ್ನು ತಯಾರಿಸುವುದನ್ನೇ ನಿಲ್ಲಿಸುತ್ತಾರಂತೆ!

ಹೀಗೂ ಆಗಬೇಕೆ? ಮೂರನೆಯವರಿಗೆ ಆಯ ಮಾತ್ರವಲ್ಲ, ಎರಡನೆಯವರಿಗೆ ನಷ್ಟ.

೦೦ ೦೦ ೦೦

**ಗೋಹಾರ್ ಪದಕಗಳು!**

೧೯೩೭ರ ಗೋಹಾರ್ ಪದಕಗಳು ಈ ಕೆಳಗಿನಂತೆ ಕೊಡಲ್ಪಟ್ಟವು:—

**೧೯೩೭ರ —**

**ಉತ್ತಮ ಚಿತ್ರ:** ಪ್ರಭಾತ ಕಂಪೆನಿಯ 'ದುನಿಯಾ ನಮಾನೆ'

**ಉತ್ತಮ ನಟ:** 'ಮುನ್ನೂರು ದಿನಾನಂತರ'ದಲ್ಲಭಿನಯಿಸಿದ ಸಾಗರದ ಮೋತೀಲಾಲ್.

**ಉತ್ತಮ ನಟಿ:** ಸಾಗರದ 'ವತನ' ಚಿತ್ರದಲ್ಲಭಿನಯಿಸಿದ ಸಿತಾರಾ.

**ಉತ್ತಮ ನಿರ್ದೇಶಕ:**

'ವಿದ್ಯಾಪತಿ'ಯೆಂಬ ನ್ಯೂಥಿಯೇಟರ್ ಚಿತ್ರವನ್ನು ನಿರ್ದೇಶಿಸಿದ ದೇವಕಿ ಬೋಸ್.

**ಉತ್ತಮ ಕಥೆ:** ಯಾರೂ ಬರೆಯದಿದ್ದುದರಿಂದ ಯಾರಿಗೂ ಇಲ್ಲ.



ಕಲ್ಕತ್ತದ ಸಿನೆಮಾ ನಟಿ
ಜಹನಾರಾ ಬೇಗಮ್ ಕಜ್ಜಾನ್.

(ನಮ್ಮ ಕರ್ನಾಟಕದವರು ಬರೆಯುತ್ತಿರುವ ಸಹಸ್ರಾರು ಕಥೆಗಳಲ್ಲಿ ಒಂದನ್ನು ಸಿನೆಮಾ ಕಥೆಯಾಗಿ ಮಾಡಬಹುದಿತ್ತು.)

೦೦ ೦೦ ೦೦

**ಆಶ್ಚರ್ಯ:**

ಶಾಂತಾ ಆಪ್ಟೆಯು ಪೋಪಟ್ ಲಾಲ್ ಸಕಲ್‌ಚಂದ್ ಥಕ್ಕರ್ ಎಂಬವರಿಗೆ ೭೦೦೦ ರೂಪಾಯಿಗಳನ್ನು ಕೊಡಬೇಕಾಗಿತ್ತಂತೆ. ಕೇಸು ಮಾಡಿದೊಡನೆಯೇ ಶಾಂತಾ ಆಪ್ಟೆಯು ಅಹಮ್ಮದಾಬಾದಿಗೆ ಹೋಗಿ ಆ ಸೇಟರ ಅತಿಥಿಯಾಗಿ ನಿಂತು ಕೇಸನ್ನು 'ಪಫಚಾ' ಮಾಡಿಬಿಟ್ಟಳಂತೆ!

ಅಬ್ಬಾ ಸ್ತ್ರೀ ಶಕ್ತಿಯೇ? ಒಂದೇ ದಿನದಲ್ಲಿ ರೂ ೭೦೦೦ಕ್ಕೆ ಸೀರೆ?

**ಮೋತಿಲಾಲನು ಬಿಟ್ಟನಂತೆ?**

ಹೌದು! ಸಾಗರ ಕಂಪೆನಿಯಿಂದ ಮೋತಿಲಾಲನು ಹೊರಗೆ ಬಂದನಂತೆ. 'ಸಾಗರದ' ತೆರೆಗಳು 'ಲಾಲ'ನನ್ನು 'ಸರಸ್ವತಿ'ಯ ದಡಕ್ಕೆಸೆದುವಂತೆ. ಸಬಿತಾದೇವಿಯು ಅವನ ಹಿಂದೆಯೇ ಹೋಗಬಹುದೋ ಏನೊ?

೦೦ ೦೦ ೦೦

**'ಸರ್ವಿಸ್, ಲಿಮಿಟೆಡ್'**

ಇದು ಸಬಿತಾದೇವಿಯ ಮುಂದಿನ ಚಿತ್ರದ ಹೆಸರು.

ಈ ಹೆಸರಿನಲ್ಲಿ ತುಂಬಾ ಅರ್ಥವಿರಬೇಕು.

—

श्री प्रसाद

ಸಮಗ್ರ ಭಾರತದಲ್ಲಿ ಅನೇಕ ವರ್ಷಗಳಿಂದ ಸಂಚರಿಸುತ್ತಲಿರುವ ಮಂತ್ರವಿದ್ಯೆಯಲ್ಲಿ ಪಾರಂಗತರಾದ ತನ್ನ ಮಂತ್ರಶಕ್ತಿಯಿಂದ ಅನೇಕ ಜನರಿಗೆ ಪ್ರಯೋಜನವನ್ನುಂಟು ಮಾಡಿದ ಯೋಗಿ ಮಹಾಶಯರೊಬ್ಬರ

# ಮಹಾಮಂತ್ರಶಕ್ತಿಯ ಪ್ರಸಾದ

ಈ ಪ್ರಸಾದಗಳ ಸೇವನೆಯಿಂದಲೂ, ಧಾರಣೆಯಿಂದಲೂ, ಪ್ರಯೋಗದಿಂದಲೂ ಅನೇಕರು ಅನೇಕ ವಿಧಗಳಿಂದ ಪ್ರಯೋಜನವನ್ನು ಹೊಂದಿರುವರು.

SRI PRASADA

*Personal interviews are prohibited*

**ಈ ಪ್ರಸಾದದಿಂದ**

ಪರೀಕ್ಷೆಯಲ್ಲಿ ಪಾಸಾಗುವದು, ಶತ್ರುಗಳನ್ನು ಸ್ವಾಧೀನಪಡಿಸುವದು, ವ್ಯಾಪಾರದಲ್ಲಿ ಅಭಿವೃದ್ಧಿ ಹೊಂದುವದು, ಮುಂತಾದ ಯಾವತ್ತು ಅಭೀಷ್ಟಗಳನ್ನು ಸಾಧಿಸಬಹುದು.

**ಒಂದು ತಿಂಗಳು ಉಪಯೋಗಿಸುವ ಪ್ರಸಾದಕ್ಕೆ ರೂಪಾಯಿ ಒಂದು.**

**ವಿಶೇಷತರದ ಪ್ರಸಾದಕ್ಕೆ ರೂಪಾಯಿ ಐದು.**

ಪ್ರಸಾದ ಬೇಕಾದವರು— ತಮ್ಮ ನಕ್ಷತ್ರ, ಯಾ ಜನನ ಸಮಯವನ್ನೂ ತಾರೀಕನ್ನೂ ತಿಳಿಸಬೇಕು. ಅದು ಗೊತ್ತಿಲ್ಲದಿದ್ದರೆ ಕಾಗದ ಬರೆಯುವ ಸ್ಥಳ, ಸಮಯಗಳನ್ನೂ ನಿರ್ದೇಶಿಸಬೇಕು.

ಶ್ರೀ ಪ್ರಸಾದ

ಪತ್ರವ್ಯವಹಾರ:—ಇಂಗ್ಲಿಷ್, ಸಂಸ್ಕೃತ, ಯಾ ಕನ್ನಡ ಭಾಷೆಯಲ್ಲಿ ಮಾಡಬಹುದು.

ಎಲ್ಲ ಪತ್ರಗಳು ಗುಪ್ತವಾಗಿರಿಸಲಾಗುತ್ತವೆ.

ಮುಖತಃ ಭೇಟಿಯನ್ನು ಇಟ್ಟುಕೊಳ್ಳಲಾಗುವುದಿಲ್ಲ.

**C. C. No. 4.**

**C/o. ANTARANGA.**

**UDIPI.**

Printed and published by P. Venkataramanacharya for and on behalf of SUPPLY AGENCY LTD., at Manipal Power Press, Udipi

This page is available for advertisen

ಡ್ಯೂಕ್ ಆಫ್
ವಿಂಡ್ಸರರ
ಜೀವನಿ.



"ಅಂತರಂಗ",

ನಿರೀಕ್ಷಿಸಿರಿ!

ಡ್ಯೂಕ್ ಆಫ್ ವಿಂಡ್ಸರರ
ಜೀವನ ಕಥೆ.

ತನ್ನ ಮನಸವೊಲಿದವಳನ್ನು
ವರಿಸುವುದಕ್ಕಾಗಿ ಬ್ರಿಟಿಷ್
ಸಾಮ್ರಾಜ್ಯದ ಒಡೆತನವನ್ನು
ಕಡೆಗಣಿಸಿ ತನ್ನ ವೈಯಕ್ತಿಕ
ಸ್ವಾತಂತ್ರ್ಯವನ್ನುಳಿಸಿಕೊಂಡ

ಎಂಟನೆಯ ಎಡ್ವರ್ಡ್
(ಈಗ ಡ್ಯೂಕ್ ಆಫ್ ವಿಂಡ್ಸರ್)
ಮತ್ತು
ವಾಲಿಸ್ ಸಿಂಪ್ಸನ್
(ಅವರ ಪತ್ನಿ)

ಇವರಿಬ್ಬರ ಸ್ವಾರಸ್ಯಮಯ ಪ್ರೇಮಕಹಾನಿಯು
೧೧—೯—೧೯೩೮ನೆಯ ಸಂಚಿಕೆಯಿಂದ ಮೊದಲ್ಗೊಂಡು

ಅಂತರಂಗದಲ್ಲಿ

ಪ್ರಕಟವಾಗಲಿದೆ.

ನಿಮ್ಮ ಪ್ರತಿಗಳನ್ನು ಈಗಲೇ ರಿಜರ್ವ್ ಮಾಡಿಸಿರಿ!

